# ಕನ್ನಡ ವಿಶ್ವವಿದ್ಯಾಲಯ
## ಹಂಪಿ

# ಜಾನಪದ ಗಾದೆಗಳಲ್ಲಿ
# ಸಾಮಾಜಿಕ ಮೌಲ್ಯ ಮತ್ತು ಸಾಹಿತ್ಯಿಕ ಮೌಲ್ಯ

ಎಂ.ಫಿಲ್. ಪದವಿಗಾಗಿ ಸಾದರಪಡಿಸಿದ ನಿಬಂಧ

**ನಿಬಂಧಕಾರರು**

ಎಸ್. ಸಿದ್ದೇಗೌಡ
ಎಂ.ಫಿಲ್. ಪದವಿ
ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

**ಮಾರ್ಗದರ್ಶಕರು**

ಪ್ರೊ. ಸುಧಾಕರ
ನಿವೃತ್ತ ಪ್ರಾಧ್ಯಾಪಕರು




**೨೦೦೬-೦೭**

# ಕನ್ನಡ ವಿಶ್ವವಿದ್ಯಾಲಯ
## ಹಂಪಿ

# ಜಾನಪದ ಗಾದೆಗಳಲ್ಲಿ ಸಾಮಾಜಿಕ ಮೌಲ್ಯ ಮತ್ತು ಸಾಹಿತ್ಯಿಕ ಮೌಲ್ಯ

ಎಂ.ಫಿಲ್. ಪದವಿಗಾಗಿ ಸಾದರಪಡಿಸಿದ ನಿಬಂಧ

**ನಿಬಂಧಕಾರರು**

ಎಸ್. ಸಿದ್ದೇಗೌಡ
ಎಂ.ಫಿಲ್. ಪದವಿ
ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

**ಮಾರ್ಗದರ್ಶಕರು**

ಪ್ರೊ. ಸುಧಾಕರ
ನಿವೃತ್ತ ಪ್ರಾಧ್ಯಾಪಕರು

೨೦೦೬-೦೭

226

## ಘೋಷಣಾ ಪತ್ರ

ಕನ್ನಡ ವಿಶ್ವವಿದ್ಯಾಲಯದಲ್ಲಿ ಎಂ.ಫಿಲ್. ಪದವಿ ವಿದ್ಯಾರ್ಥಿಯಾಗಿ ಅಧ್ಯಯನ ಮಾಡುತ್ತಿರುವ ನಾನು ಎಂ.ಫಿಲ್. ಪದವಿಯ ಒಂದು ಭಾಗವಾದ ನಿಬಂಧ ರಚನೆಗೆ ಸಂಬಂಧಿಸಿದಂತೆ **'ಜಾನಪದ ಗಾದೆಗಳಲ್ಲಿ ಸಾಮಾಜಿಕ ಮೌಲ್ಯ ಮತ್ತು ಸಾಹಿತ್ಯಿಕ ಮೌಲ್ಯ'** ಎಂಬ ವಿಷಯವನ್ನು ಆಯ್ಕೆ ಮಾಡಿಕೊಂಡು ಸಂಶೋಧನಾ ನಿಬಂಧವನ್ನು ಸಿದ್ಧಪಡಿಸಿರುತ್ತೇನೆ. ಈ ಸಂಶೋಧನಾ ನಿಬಂಧವನ್ನು ಈ ಮೊದಲು ಭಾಗಶಃವಾಗಲಿ ಅಥವಾ ಪೂರ್ಣವಾಗಿಯಾಗಲೀ ಯಾವುದೇ ಪದವಿ ಅಥವಾ ಡಿಪ್ಲೊಮೋಗಳಿಗಾಗಲಿ ಅಥವಾ ಅಂತಹ ಇತರ ಯಾವುದೇ ಪದವಿ ಪರೀಕ್ಷೆಗಳಿಗೆ ನಾನು ಒಪ್ಪಿಸಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ಮೈಸೂರು

ದಿನಾಂಕ : 25/07/07

ನಿಬಂಧಕರ ಸಹಿ

(ಸಿದ್ದೇಗೌಡ, ಎಸ್.)

## ಮಾರ್ಗದರ್ಶಕರ ಪ್ರಮಾಣ ಪತ್ರ

ನಿಬಂಧಕ, ಎಸ್.ಸಿದ್ದೇಗೌಡ, ಎಂ.ಫಿಲ್. ಪದವಿ ವಿದ್ಯಾರ್ಥಿ ಅವರು ನನ್ನ ಮಾರ್ಗದರ್ಶನದಲ್ಲಿ ಎಂ.ಫಿಲ್. ಪದವಿಯ ಒಂದು ಭಾಗವಾದ ನಿಬಂಧ ರಚನೆಗೆ ಸಂಬಂಧಿಸಿದಂತೆ **'ಜಾನಪದ ಗಾದೆಗಳಲ್ಲಿ ಸಾಮಾಜಿಕ ಮೌಲ್ಯ ಮತ್ತು ಸಾಹಿತ್ಯಿಕ ಮೌಲ್ಯ'** ಎಂಬ ಈ ನಿಬಂಧವನ್ನು ಸಿದ್ಧಪಡಿಸಿರುತ್ತಾರೆ. ಈ ನಿಬಂಧವನ್ನು ಈ ಮೊದಲು ಭಾಗಶಃವಾಗಲಿ, ಪೂರ್ಣವಾಗಿಯಾಗಲಿ ಬೇರಾವುದೇ ಪದವಿ, ಡಿಪ್ಲೊಮೊ ಅಥವಾ ಇತರ ಪದವಿಗಳಿಗಾಗಿ ಒಪ್ಪಿಸಿಲ್ಲ.

ಸ್ಥಳ : ಮೈಸೂರು

ದಿನಾಂಕ : 30/7/2007

ಮಾರ್ಗದರ್ಶಕರ ಸಹಿ

ಸುಧಾಕರ

(ಪ್ರೊ. ಸುಧಾಕರ)

# ಕೃತಜ್ಞತೆಗಳು

**'ಜಾನಪದ ಗಾದೆಗಳಲ್ಲಿ ಸಾಮಾಜಿಕ ಮೌಲ್ಯ ಮತ್ತು ಸಾಹಿತ್ಯಿಕ ಮೌಲ್ಯ"** ಎಂಬ ನಿಬಂಧವನ್ನು ರಚಿಸಲು ನನಗೆ ಸೂಕ್ತ ಮಾರ್ಗದರ್ಶನ ಹಾಗೂ ಸಲಹೆಗಳನ್ನು ನೀಡಿದ ಪೂಜ್ಯ ಗುರುಗಳಾದ ಪ್ರೊ.ಸುಧಾಕರ ಅವರಿಗೆ ಹೃದಯಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಈ ನಿಬಂಧ ರಚನೆಯಲ್ಲಿ ಸಹಕರಿಸಿದ ಗುರುಗಳಾದ ಡಾ. ರಾಗೌ, ಪ್ರೊ. ಪಿ.ಕೆ.ರಾಜಶೇಖರ, ಪ್ರೊ.ತಾರಾನಾಥ್ ಅವರಿಗೆ ಈ ಮೂಲಕ ವಂದನೆಗಳನ್ನು ತಿಳಿಸುತ್ತೇನೆ. ಅಲ್ಲದೆ ನನ್ನ ತಂದೆ-ತಾಯಿಗಳಿಗೂ ಹಾಗೂ ನನ್ನ ಎಲ್ಲಾ ಸ್ನೇಹಿತರಿಗೂ ಈ ಮೂಲಕ ಕೃತಜ್ಞತೆಯನ್ನು ತಿಳಿಸುತ್ತೇನೆ. ಡಾ.ನೀಲಗಿರಿ ತಳವಾರ್ ಅವರು ನನ್ನ ನಿಬಂಧದ ಬರಹದ ಪ್ರತಿಯನ್ನು ತಿದ್ದಿ ಕೆಲವಾರು ಸಲಹೆ ಸೂಚನೆಗಳನ್ನು ನೀಡಿ ನಿಬಂಧ ಸರಿಯಾದ ರೀತಿಯಲ್ಲಿ ರಚನೆಯಾಗಲು ಸಹಕರಿಸಿದ್ದಾರೆ. ಆದುದರಿಂದ ಅವರಿಗೂ ನನ್ನ ಕೃತಜ್ಞತೆಗಳನ್ನು ತಿಳಿಸುತ್ತೇನೆ.

ಸ್ಥಳ : ಮೈಸೂರು
ದಿನಾಂಕ : ೨೮/೦೫/೧೯೯.

ನಿಬಂಧಕರ ಸಹಿ

(ಸಿದ್ದೇಗೌಡ, ಎಸ್.)

## ಜಾನಪದ ಗಾದೆಗಳಲ್ಲಿ

# ಸಾಮಾಜಿಕ ಮೌಲ್ಯ ಮತ್ತು ಸಾಹಿತ್ಯಿಕ ಮೌಲ್ಯ

ಎಸ್. ಸಿದ್ದೇಗೌಡ
ಎಂ.ಫಿಲ್. ಪದವಿ
ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಮೈಸೂರು.

# ಪರಿವಿಡಿ

# ೧. ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ.

ಕನ್ನಡ ಗ್ರಂಥಸ್ಥ ಪ್ರೌಢ ಸಾಹಿತ್ಯಕ್ಕೆ ಸುಮಾರು ೧೫೦೦ ವರ್ಷಗಳ ಸುಧೀರ್ಘ ಇತಿಹಾಸವಿದೆ. ಅದರ ಹಿಂದಿನಿಂದಲೂ ಕನ್ನಡ ಭಾಷೆ ಬೆಳೆಯತೊಡಗಿ ಜನತೆಯಲ್ಲಿ ರೂಢಮೂಲವಾಗಿದ್ದಿರಬೇಕು. ಕ್ರಿ.ಶ.ದ ಆರಂಭದ ಹೊತ್ತಿಗಾಗಲೇ ಕನ್ನಡ ಭಾಷೆ ಸ್ಪಷ್ಟವಾಗಿ ರೂಪುಗೊಂಡು ಪುಷ್ಟಿಗೊಳ್ಳಲಾರಂಭಿಸಿತ್ತೆಂದು ಹಲವಾರು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ. ಆದರೆ ಕನ್ನಡದಲ್ಲಿ ಇದುವರೆಗೆ ಸಿಕ್ಕಿರುವ ಗ್ರಂಥಗಳಲ್ಲಿ ಕ್ರಿ.ಶ. ಸು ೮೫೦ರಲ್ಲಿ ರಚನೆಯಾದ 'ಕವಿರಾಜ ಮಾರ್ಗವೇ' ಪ್ರಾಚೀನವಾದುದು. ಇದಕ್ಕಿಂತಲೂ ಮೊದಲು ಕನ್ನಡದಲ್ಲಿ ಸಾಹಿತ್ಯ ಕೃಷಿ ನಡೆದಿರುವ ಸಾಧ್ಯತೆಯನ್ನು ತಳ್ಳಿಹಾಕುವಂತಿಲ್ಲ, ಕ್ರಿ.ಶ. ೪೫೦ರ ಹಲ್ಮಿಡಿ ಶಾಸನ ಕನ್ನಡದಲ್ಲಿ ಸಾಹಿತ್ಯ ಕೃಷಿ ಆರಂಭವಾಗಿದ್ದುದರ ಕುರುಹಾಗಿದೆ. ಜೊತೆಗೆ ಜನಪದ ಸಾಹಿತ್ಯ ಅತಿ ಸಮೃದ್ಧ ಪ್ರಮಾಣದಲ್ಲಿ ರಾಶಿಯಾಗಿದ್ದುದ್ದನ್ನು ಕಾಣಬಹುದು. ಕವಿರಾಜ ಮಾರ್ಗಕಾರ ತನ್ನ ಗ್ರಂಥದಲ್ಲಿ ಕನ್ನಡ ನಾಡಿನ ಸಾಮಾನ್ಯ ಜನರನ್ನು ಕುರಿತು "ಕುರಿತೋದ ದೆಯುಂ ಕಾವ್ಯ ಪ್ರಯೋಗ ಪರಿಣತ ಮತಿಗಳ್" ಎಂದು ಸಾರಿದ್ದಾನೆ. ಇದು ಮುಖ್ಯವಾಗಿ ಜನಪದ ಸಾಹಿತ್ಯವನ್ನು ಕುರಿತು ಆಡಿದ ಮಾತಾಗಿದೆ. ಅಂದರೆ ಆ ಕಾಲಕ್ಕಾಗಲೇ ಜನಪದ ಸಾಹಿತ್ಯ ಒಂದು ಉನ್ನತ ಸ್ಥಾನವನ್ನು ಪಡೆದಿತ್ತು.

ಕಾಲಾನಂತರದಲ್ಲಿ ಜನಪದ ಸಾಹಿತ್ಯ ಅವಜ್ಞೆಗೆ, ತಿರಸ್ಕಾರಕ್ಕೆ ಗುರಿಯಾಯಿತು. ಜನಪದ ಸಾಹಿತ್ಯ ಅಶಿಷ್ಟರ, ಗ್ರಾಮ್ಯರ, ಓದು ಬರಹ ಬಾರದವರ ನುಡಿಯಾದುದರಿಂದ ಅದರ ಬಗ್ಗೆ ಮಾತಾಡುವುದೇ ಅವಮಾನ ಎಂಬ ಭಾವನೆ ಶಿಷ್ಟರಲ್ಲಿ ಬೇರೂರಿತು. ನಿಜವಾದ ಸಾಹಿತ್ಯವೆಂದರೆ ಬರಹದ ಸಾಹಿತ್ಯವೇ ಹೊರತು ಬೇರೆಯಲ್ಲ. ಆದುದರಿಂದ ಈ ರೀತಿಯ ಜನಪದ ಸಾಹಿತ್ಯಕ್ಕೆ ಯಾವುದೇ ಬೆಲೆಯಿಲ್ಲ ಎಂದು ತಿರಸ್ಕರಿಸಿದರು. ಅಷ್ಟೇ ಅಲ್ಲ ಜನಪದ ಸಾಹಿತ್ಯವನ್ನು ಅವಹೇಳನ ಮಾಡುವ, ಕಟಕಿಯಾಡುವ, ವ್ಯಂಗ್ಯವಾಡುವ ಪ್ರವೃತ್ತಿ ಕೆಲವು ಶಿಷ್ಟ ಸಾಹಿತಿಗಳಲ್ಲಿ ಮನೆಮಾಡಿತು. ಮಧುರ ಕವಿಯು (ಸು ೧೪೦೦) ತನ್ನ ಧರ್ಮನಾಥ ಪುರಾಣದಲ್ಲಿ ಜನಪದ ಸಾಹಿತ್ಯವನ್ನು ಕುರಿತು ಈ ರೀತಿ ಕಟಕಿಯಾಡಿದ್ದಾನೆ.

ಪಂಡಿತರುಂ ವಿವಿಧ ಕಳಾ

ಮಂಡಿತರುಂ ಕೇಳತಕ್ಕ ಕೃತಿಯಂ ಕ್ಷಿತಿಯೊಳ್।

ಕಂಡರ್ ಕೇಳ್ವೊಡೆ ಗೊರವರ

ಡುಂಡುಚಿಯ ಬೀದಿವಜೆಯ ಬೀರನ ಕತೆಯೇ॥

ಆದರೆ ಇಂದು ಆ ಪರಿಸ್ಥಿತಿಯಿಲ್ಲ. ಜನಪದ ಸಾಹಿತ್ಯಕ್ಕೆ ಶಿಷ್ಟ ಸಾಹಿತ್ಯದಷ್ಟೆ ನೆಲೆ, ಬೆಲೆಯನ್ನು ನೀಡಲಾಗುತ್ತಿದೆ. ಜನಪದ ಎಲ್ಲ ಸಾಹಿತ್ಯದ ಮೂಲ, ತಾಯಿ ಎಂಬುದು ಅರಿವಾಗಿದೆ. ಆದುದರಿಂದ ಇಂದು ಜನಪದ ಸಾಹಿತ್ಯವನ್ನು ಸಂಗ್ರಹಿಸಿ ಸಂಪಾದಿಸುವ ಕಾರ್ಯ ಅಪಾರ ಪ್ರಮಾಣದಲ್ಲಿ ನಡೆಯುತ್ತಿದೆ. ಜಾನಪದ ಸಾಹಿತ್ಯದ ಬಗೆ, ಭಾಷಿಕ ಬಗೆ, ವೈಜ್ಞಾನಿಕ ಬಗೆ, ಕ್ರಿಯಾತ್ಮಕ ಬಗೆಗಳಿಗೆ ಸಂಬಂಧಿಸಿದಂತೆ ಕಥೆ, ಗೀತೆ, ಲಾವಣಿ, ಒಗಟು, ಗಾದೆ, ನಂಬಿಕೆ, ಸಂಪ್ರದಾಯ, ವೈದ್ಯ, ಅಡುಗೆ, ಉಡುಗೆ, ತೊಡುಗೆ, ವೃತ್ತಿ, ಮಾಟ, ಮಂತ್ರ, ನೃತ್ಯ, ನಾಟಕ, ಚಿತ್ರ, ಶಿಲ್ಪ, ಆಟ, ಕೂಟ, ನಡೆ, ನುಡಿ, ಮುಂತಾಗಿ ಜನಪದ ಜೀವನದ ಎಲ್ಲ ಸ್ಥರಗಳನ್ನು ಒಳಗೊಳ್ಳುವ, ವಿಸ್ತಾರ, ವೈವಿಧ್ಯದ ಹಿನ್ನಲೆಯಲ್ಲಿ ಪರಿಶೋಧನೆಗಳು ನಡೆಯುತ್ತಿವೆ, ಇಂಥ ಜನಪದ ಪ್ರಕಾರಗಳಲ್ಲಿ 'ಗಾದೆ'ಯೂ ಒಂದು.

"ಸಾಮಾನ್ಯವಾಗಿ ಗಾದೆ ಇಲ್ಲದೆ ಭಾಷೆಯಿಲ್ಲ; ಗಾದೆ ಬರದ ಮನುಷ್ಯನಿಲ್ಲ. ಗಾಳಿ ಬೆಳಕಿನಂತೆ ಜನಜೀವನದ ಉದ್ದಗಲಗಳನ್ನು ಆವರಿಸಿಕೊಂಡಿರುವ ಗಾದೆ ಜನಪದ ಸಾಹಿತ್ಯದ ಜನಪ್ರಿಯ ಪ್ರಕಾರಗಳಲ್ಲೊಂದು. ಆಡು ಮುಟ್ಟದ ಸೊಪ್ಪಿಲ್ಲ ಎನ್ನುವಂತೆ ಗಾದೆ ಮೆಟ್ಟದ ಬದುಕಿನ ಭಾಗವಿಲ್ಲ: ಮುಟ್ಟದ ವಸ್ತುವಿಲ್ಲ; ತಟ್ಟಿಬ್ಬಸದ ಭಾವವಿಲ್ಲ. ಒಂದು ರೀತಿಯಲ್ಲಿ ಅದು ಜನ ಸಾಮಾನ್ಯರ ವಿಶ್ವಕೋಶ; ತಾವೇ ನಿರ್ಮಿಸಿಕೊಂಡು, ಪಾಲಿಸಿಕೊಂಡು ಬಂದ ಸಂವಿಧಾನ; ತಾವೇ ರಚಿಸಿದ ವೇದ. ಅದರಲ್ಲಿ ಸದಸದ್ವಿವೇಚನೆ, ವಿಧಿನಿಷೆದ, ಜೀವನ ದರ್ಶನ, ಸೌಂಧರ್ಯಾಭಿರುಚಿ, ವ್ಯವಹಾರ ನೀತಿ-ರೀತಿಗಳು ಮೊದಲಾದವುಗಳೆಲ್ಲ ಬನಿಯುಳ್ಳ ಭಾಷೆಯಲ್ಲಿ ಭಟ್ಟಿ ಇಳಿದಿವೆ. ಸ್ವಾನುಭವದಿಂದ ಸಹಜವಾಗಿ ಮೂಢಿಬಂದಿರುವ ಇವುಗಳ ಉಸಿರು ಸರಳತೆ. ಆದರೆ ಆ ಸರಳತೆಯಲ್ಲೂ ತಮ್ಮ ವಿಶಿಷ್ಟತೆಯನ್ನು ಕಾಪಾಡಿಕೊಂಡು ಬಂದಿರುವುದೇ ಇವುಗಳ ದೊಡ್ಡ ಗುಣ."[೧]

ಗಾದೆಗಳು ರಚನೆಯಲ್ಲಿ ವ್ಯಷ್ಟಿಕೃತವೇ ಆದರೂ ಅವು ಸಮಷ್ಟಿಕೃತವಾಗಿ ಪರಿಣಮಿಸಿವೆ. ಜನಸಾಮಾನ್ಯರು ತಾವು ಸ್ವತಃ ಅನುಭವಿಸಿದ ಅನುಭವದ ಆಧಾರದ ಮೇಲೆ ಮೂಢಿ ಬಂದಿರುವಂತಹವು. ಈ ಗಾದೆಗಳಲ್ಲಿ ಸಾಮಾಜಿಕ, ಸಾಂಸ್ಕೃತಿಕ, ಸಾಹಿತ್ಯಿಕ ಅಂಶಗಳು ಅಡಕವಾಗಿವೆ, ಗಾದೆಗಳು ಆಕಾರದಲ್ಲಿ ವಾಮನನಂತಿದ್ದರೂ ಅರ್ಥದಲ್ಲಿ ತ್ರಿವಿಕ್ರಮನಂತೆ ಜೀವನದ ಎಲ್ಲ ಅಂಶಗಳನ್ನು ತಮ್ಮ ಒಡಲಲ್ಲಿ ಅಡಗಿಸಿಕೊಂಡಿವೆ.

ಈ ಗಾದೆಗಳು ಶತ-ಶತಮಾನಗಳಿಂದಲೂ ಬಳಕೆಯಲ್ಲಿದ್ದು, ಪೀಳಿಗೆಯಿಂದ ಪೀಳಿಗೆಗೆ ಸಲುವಳಿಯಾಗತ್ತಲೇ ಬಂದಿವೆ. ಜನಪದರು ಮಾತನಾಡುವಾಗ ತಮ್ಮ ಮಾತಿಗೆ ಪುಷ್ಟಿಯನ್ನು ನೀಡಲೋ

---

೧. ಸುಧಾಕರ - ನಮ್ಮ ಸುತ್ತಿನ ಗಾದೆಗಳು, ಪ್ರಸ್ತಾವನೆ - ಪು.ಸಂ. ೧೧.

ಅಥವಾ ಅದರ ಪ್ರಭಾವವನ್ನು ಸ್ಪಷ್ಟಪಡಿಸಲೋ ಮಾತಿನ ಮಧ್ಯೆ ಬಳಸುತ್ತಾರೆ. ಮಾತಿನ ಮಧ್ಯೆ ಯಾವುದೇ ಗಾದೆ ನೆನಪಿಗೆ ಬರದೇ ಹೋದರೆ 'ಅದೇನೋ ಗಾದೆ ಹೇಳಿದಾಗಾಯಿತು' ಎಂದು ತೇಲಿಸಿ ಹೇಳುತ್ತಾರೆ. ಇದರಿಂದ ಗಾದೆಗಳು ಜನ ಸಾಮಾನ್ಯರ ಜೀವನದ ಒಂದು ಅಂಗವಾಗಿ ಪರಿಣಮಿಸಿವೆ.

ಇಂಗ್ಲೀಷಿನ Proverb ಎಂಬ ಶಬ್ದಕ್ಕೆ ಸಂವಾದಿಯಾಗಿ ಕನ್ನಡದಲ್ಲಿರುವ ಪದಗಳೆಂದರೆ ನಾಣ್ಣುಡಿ ಮತ್ತು ಗಾದೆ. ನಾಣ್ಣುಡಿ ಎಂದರೆ ನಾಡಿನ ನುಡಿ. ಅಂದರೆ ನಾಡಿನಲ್ಲಿ ಪ್ರಸಿದ್ಧವಾದ, ಪ್ರಖ್ಯಾತವಾದ ನುಡಿ. ಕನ್ನಡದ ನಾಣ್ಣುಡಿಯ ಅರ್ಥದಲ್ಲಿ ಪ್ರವಾದ, ಲೋಕ ಪ್ರವಾದ, ಲೋಕೋಕ್ತಿ, ಪ್ರಾಚೀನೋಕ್ತಿ, ಸಾಮತಿ, ಸಾರೋಕ್ತಿ, ಸೂಕ್ತಿ, ಸೂತ್ರ, ಉದ್ದರಣೆ, ಹೇಳಿಕೆ, ವಿಧಿ, ನಿಯಮ, ಪ್ರಮಾಣ ಮೊದಲಾದ ಶಬ್ದಗಳು ಸಂಸ್ಕೃತದಲ್ಲಿವೆ. ಲೋಕದಲ್ಲಿ ಪ್ರಸಿದ್ದವಾದ ಉಕ್ತಿ ಲೋಕೋಕ್ತಿಯಾಗಿರುವಂತೆ, ನಾಡಿನಲ್ಲಿ ಪ್ರಸಿದ್ದವಾಗಿರುವ ನುಡಿ ನಾಣ್ಣುಡಿಯಾಗಿದೆ. ಆದರೆ ಇವೆರಡೂ ಸಾಮ್ಯತೆಯನ್ನು ಹೊಂದಿವೆ. ಗಾದೆ ಎಂಬ ಪದ ಹೇಗೆ ಬಂತು? ಗಾದೆ ಎಂಬುದು ಕನ್ನಡ ಶಬ್ದವಾಗಿರದೆ ಸಂಸ್ಕೃತದಿಂದ ಬಂದಿರಬಹುದು. ಇಲ್ಲವೆ ಸಂಸ್ಕೃತದಿಂದ ಪ್ರಾಕೃತಕ್ಕೆ ಹೋಗಿ ಕನ್ನಡಕ್ಕೆ ಬಂದಿರುವ ಸಾಧ್ಯತೆಯಿದೆ ಎಂಬುದಾಗಿ ವಿದ್ವಾಂಸರು ತಿಳಿಸಿದ್ದಾರೆ. ಅಂದರೆ ಸಂಸ್ಕೃತದ ಗಾಥಾ ಪ್ರಾಕೃತದಲ್ಲಿ ಗಾಹೆಯಾಗಿ, ಕನ್ನಡದಲ್ಲಿ ಗಾದೆಯಾಗಿರಬೇಕು. (ಗಾಥಾ > ಗಾಹೆ > ಗಾದೆ). ಆದರೆ ಗಾಥಾ ಮತ್ತು ಗಾದೆ ಶಬ್ದಗಳಿಗೆ ಅರ್ಥ ವ್ಯತ್ಯಾಸವಿರುವುದನ್ನು ಗಮನಿಸಬಹುದು. ಗಾಥಾ ಸಂಸ್ಕೃತದಲ್ಲಿ ಒಂದು ಛಂದೋರೂಪವನ್ನು ಕುರಿತದ್ದು. ಆದರೆ ಗಾದೆ ನಾಣ್ಣುಡಿ ಅರ್ಥದಲ್ಲಿ ಬಳಕೆಯಾಗುತ್ತಿದೆ. ಆದರೆ ಒಂದು ಭಾಷೆಯಿಂದ ಮತ್ತೊಂದು ಭಾಷೆಗೆ ಬಂದ ಶಬ್ದ ಮೂಲಾರ್ಥದಲ್ಲೇ ಬಳಕೆಯಾಗದೆ ಬೇರೊಂದು ಅರ್ಥದಲ್ಲಿ ಬಳಕೆಯಾಗುತ್ತಿರುವುದಕ್ಕೆ ಬೇಕಾದಷ್ಟು ನಿದರ್ಶನಗಳಿವೆ. ಉದಾಹರಣೆಗೆ ಅವಸರ ಎಂಬ ಸಂಸ್ಕೃತ ಶಬ್ದ ಸಮಯ ಎಂಬ ಅರ್ಥದಲ್ಲಿ ಬಳಕೆಯಾಗುತ್ತಿದ್ದರೆ. ಅದೇ ಶಬ್ದ ಕನ್ನಡದಲ್ಲಿ ತರ್ತು ಎಂಬ ಅರ್ಥದಲ್ಲಿ ಬಳಕೆಯಾಗುತ್ತಿದೆ. ಇದೇ ರೀತಿ ಈ ಗಾದೆ ಎಂಬ ಶಬ್ದವು ಕೂಡ. ಗಾದೆ ಶಬ್ದ ಕನ್ನಡವನ್ನು ಪ್ರವೇಶಿಸಿದ ಕೂಡಲೇ 'ಹೊಸ ನೀರು ಬಂದು ಹಳೆ ನೀರು ಕೊಚ್ಚಿಕೊಂಡು ಹೊಯ್ತು' ಎಂಬ ಗಾದೆಯಂತೆ ನಾಣ್ಣುಡಿ ಜನರ ಬಳಕೆಯಿಂದ ಮರೆಯಾಯಿತು.

ಗಾದೆಗಳನ್ನು ಅವುಗಳ ಸ್ವರೂಪದ ದೃಷ್ಟಿಯಿಂದ ಎರಡು ವಿಭಾಗ ಮಾಡುವುದು ರೂಢಿ. ಜನಪದ ಗಾದೆಗಳು ಮತ್ತು ಗ್ರಾಂಥಿಕ ಅಥವಾ ಗ್ರಂಥಸ್ಥ ಗಾದೆಗಳು, ಆದರೆ ಅವನ್ನು ಜನಪದ ಗಾದೆಗಳು, ನಾಗರಿಕ ಗಾದೆಗಳು ಮತ್ತು ಗ್ರಂಥಸ್ಥ ಗಾದೆಗಳು ಎಂಬುದಾಗಿ ಮೂರು ವಿಭಾಗ ಮಾಡುವುದು ಹೆಚ್ಚು ಸೂಕ್ತವೆನ್ನಿಸುತ್ತದೆ. ಏಕೆಂದರೆ ನಾಗರಿಕ ಗಾದೆಗಳೆಲ್ಲ ಗ್ರಂಥಸ್ಥವಾಗಿರುವುದಿಲ್ಲ. ನಾಗರಿಕರೆಲ್ಲ ವಿದ್ಯಾವಂತರೂ

ಪಂಡಿತರೂ ಆಗಿರಲು ಸಾಧ್ಯವಿಲ್ಲ. ಈ ನಿಟ್ಟಿನಿಂದ ನೋಡುವಾಗ ಪ್ರತಿಯೊಂದು ಸಮಾಜದಲ್ಲಿಯೂ ಮುಖ್ಯವಾಗಿ ಮೂರು ವರ್ಗದ ಜನರನ್ನು ಕಾಣುತ್ತೇವೆ.

೧. "ನಿರಕ್ಷರ ಕುಕ್ಷಿಗಳೆನ್ನಿಸಿಕೊಂಡ ಶುದ್ದ ಜಾನಪದ ವರ್ಗ ಅಥವಾ ವಿಶಾಲ ಸಮಾಜದ ಕೆಳವರ್ಗ;

೨. ಅಕ್ಷರಸ್ಥರಾದರೂ 'ವಿದ್ಯಾವಂತ' ರಲ್ಲದ ಹಳ್ಳಿ ಅಥವಾ ಪಟ್ಟಣಗಳಲ್ಲಿ ವಾಸಿಸುವ ಸಾಮಾನ್ಯ ಜನವರ್ಗ ಅಥವಾ ಮಧ್ಯಮ ವರ್ಗ

೩. ವಿದ್ಯಾವಂತರೂ ನಾಗರಿಕರೂ ಪ್ರತಿಭಾವಂತರೂ ಆದ ಬುದ್ದಿ ಜೀವಿಗಳ ವರ್ಗ ಅಥವಾ ಉನ್ನತ ವರ್ಗ"೧

ಜನಪದ ಗಾದೆಗಳೆಂದರೆ ಸಂಪೂರ್ಣವಾಗಿ ಹಳ್ಳಿಯ ಜನಸಾಮಾನ್ಯರಿಂದ ರಚಿತವಾದವುಗಳು. ಇವೇ ಎಲ್ಲ ಗಾದೆಗಳಿಗೂ ಮೂಲ. ಉದಾಹರಣೆಗೆ – 'ಚೋಜ್ಗ ನೋಡ್ರೇ ಗೀಜ್‌ಗಣ್ಣಿ ಬಸ್ರಾಗಿರದ' 'ಮಲಗಾಕೋಗಿ ಮಗ ಕೆಟ್ಟ, ಬೀಸೋಕೋಗಿ ಸೊಸೆ ಕೆಟ್ಟು' 'ಮರ್ಮಿಲ್ದೋನ್ಮಾತು ವಸ್ಮಗೇತೂತು'

ನಾಗರಿಕ ಗಾದೆಗಳೆನ್ನಬಹುದಾದ ಗಾದೆಗಳಲ್ಲಿ ಬಹುಪಾಲು ಗಾದೆಗಳು ಮೂಲತಃ ಜನಪದ ಗಾದೆಗಳೆ. ಏಕೆಂದರೆ ಪಟ್ಟಣಿಗರಲ್ಲಿ ಬಹುಮಂದಿ ಹುಟ್ಟಿನಿಂದಲೆ ಜನಪದರೆ. ಅದರಲ್ಲೂ ವಿಶೇಷವಾಗಿ ಕೆಳಸ್ಥರದ ಕಾರ್ಮಿಕ ವರ್ಗದವರು ಗ್ರಾಮೀಣ ಪ್ರದೇಶಗಳಿಂದ ಬಂದು ಪಟ್ಟಣ ಸೇರಿರುತ್ತಾರೆ. ಇವರ ಗಾದೆಗಳು ಈ ರೀತಿ ಇರುತ್ತವೆ. 'ತೆನೆ ತಿಂದ ಎತ್ತು ತೆವರಿಯನ್ನು ಏರಿತು' 'ಮೂರು ಬಿಟ್ಟವರು ಲೋಕಕ್ಕೆ ದೊಡ್ಡವರು'.

ಗ್ರಂಥಸ್ಥ ಗಾದೆಗಳೆಂದರೆ ಕವಿಕೃತವಾದವುಗಳು. ಇವರು ಜನಪದದ ಗಾದೆಗಳನ್ನು ಎತ್ತಿಕೊಂಡು ಅದರ ಅರೆ ಕೊರೆಗಳನ್ನು ತಿದ್ದಿ ತೀಡಿ ಬಳಸಿಕೊಳ್ಳಬಹುದು ಅಥವಾ ಸ್ವತಃ ಸೃಷ್ಟಿ ಮಾಡಬಹುದು. ಉದಾಹರಣೆಗಳು–ಕವಿರಾಜ ಮಾರ್ಗದಲ್ಲಿ 'ಎರಡಕ್ಕೆ ಬಿಟ್ಟ ಕಜುವಂ ಪೋಲ್ಗುಂ' 'ಕಾಣದಂತೆ–ಎಂದುಂ ಕಣ್ಣಳ್ ತಮ್ಮ ಕಾಡಿಗೆಯಂ' ವಡ್ಡರಾಧನೆಯಲ್ಲಿ 'ಕಳ್ಳನ್ ಒಳ್ಳಿದನ್ ಎಂದಡೆ ಆತನ್ ಕಳ್ಳನ್' 'ಭಾಗ್ಯಮಿಲ್ಲದುದಂ ಪೆಱಲಾಗ' ಪಂಪನಲ್ಲಿ 'ಬಡಿಗಂಡನಿಲ್ಲ ಪಾಲನೆ ಕಂಡಂ' ಪಡೆನೋಡಲ್ ಬಂದವರಂ ಗುಡಿವೊಜಿಸಿದರ್' ರನ್ನನಲ್ಲಿ 'ಅಂದು ಪುಟ್ಟಿದರ್ ಅಂದೇ ಸತ್ತರ್' 'ಸತ್ತವರನ್ ಎತ್ತುವರಾರ್'. ಇವೇ ಮುಂತಾದ ಗಾದೆಗಳನ್ನು ಕಾಣಬಹುದು.

---

೧. ನಂ. ತಪಸ್ವಿಕುಮಾರ – ಕನ್ನಡ ಗಾದೆಗಳ ಸಮೀಕ್ಷೆ. ಪು.ಸಂ. ೨೩.

ಗಾದೆಯ ಲಕ್ಷಣವನ್ನು ಸೂತ್ರ ರೂಪದಲ್ಲಿ ಹೇಳುವುದು ಅಥವಾ ಹಿಡಿದಿರಿಸುವುದು ಕಷ್ಟ. ಏಕೆಂದರೆ ಒಂದು ಮಾತಿನಲ್ಲಿ ಏನಾದರೂ ಹೇಳಲು ಹೊರಟರೆ ಅದರಿಂದ ಹೊರತಾದ ವಿಷಯಗಳೇ ಹೆಚ್ಚಿಗೆ ಇರುವ ಸಾಧ್ಯತೆ ಇರುವುದರಿಂದ ಸೂತ್ರವೊಂದರಲ್ಲಿ ಗಾದೆಯ ಸಮಸ್ತ ಲಕ್ಷಣಗಳನ್ನೆಲ್ಲ ಬಂಧಿಸಲು ಬರುವಂತಿಲ್ಲ. ಗಾದೆ ನೂರು ಭಾವದ ನೂರು ವಿಷಯದ ನೂರು ಅಭಿವ್ಯಕ್ತಿಯಾಗಿರುವುದರಿಂದ ಈ ಕಷ್ಟ ಒದಗುವುದು ಅತ್ಯಂತ ಸಹಜ.

ಗಾದೆಗಳ ಲಕ್ಷಣವನ್ನು ಅರಿಯಬೇಕಾದರೆ ವಿವಿಧ ವಿದ್ವಾಂಸರು ವ್ಯಕ್ತಪಡಿಸಿರುವ ಕೆಲವು ಲಕ್ಷಣಗಳನ್ನು ತಿಳಿಯುವುದು ಅವಶ್ಯಕ, ಗಾದೆಯ ರಚನೆಯನ್ನು ಬರೆಯುತ್ತಾ;

ಜೆ.ಎ. ಕೆಲ್ಲೊ ಅವರು ನಾಲ್ಕು ಗುಣಗಳನ್ನು ಹೆಸರಿಸುತ್ತಾರೆ; 'ಸಂಕ್ಷಿಪ್ತತೆ, ವಿವೇಕ ಪೂರ್ಣತೆ ಅಥವಾ ಸಂವೇದನಾ ಶೀಲತೆ, ತೀಕ್ಷ್ಣತೆ ಮತ್ತು ಜನಪ್ರಿಯತೆ'

'ಸರ್ವೇ ಸಾಮಾನ್ಯವಾದ ಮತ್ತು ಗಮನಾರ್ಹವಾದ ಉಪಯೋಗದಲ್ಲಿನ ಅಡಕವೂ ಸಾರಭೂತವೂ ಆದ ಮಾತು ಅಥವಾ ಹೆಚ್ಚು ವಿಷಯಗಳನ್ನು ಕೆಲವೇ ಮಾತುಗಳಲ್ಲಿ ಭಟ್ಟಿ ಇಳಿಸಿದುದು' ಎಂಬುದಾಗಿ ಥಾಮಸ್ ಪುಲ್ಲರನ ಅಭಿಪ್ರಾಯ.

ಲಾರ್ಡ್ ಜಾನ್‌ರಸೆಲ್ ಹೇಳುವಂತೆ ಇದು 'ಹಲವರ ಜ್ಞಾನ ಒಬ್ಬನ ವಿವೇಕ'

ಇಸೆಲಿಯನ್ ಎಂಬ ಜರ್ಮನ್ ಗಾದೆಗಳ ಸಂಗ್ರಹಕಾರ ಗಾದೆಗಳ ಲಕ್ಷಣ ನಿರೂಪಣೆಗಳನ್ನು ಚರ್ಚಿಸುತ್ತಾ ಆಡಿರುವ ಈ ಕೆಲವು ಮಾತುಗಳು ಗಮನಾರ್ಹ: 'ಗಾದೆಗಳೆಂದರೆ ಜನ ಸಾಮಾನ್ಯರಲ್ಲಿ ಚಲಾವಣೆಯಲ್ಲಿರುವ, ಸಾರ್ವಜನಿಕ ಮುದ್ರೆ ಬಿದ್ದಿರುವ ಪ್ರಚಲಿತವೂ ಸ್ವಿಕೃತ ಮೌಲ್ಯಭರಿತವೂ ಆಗಿರುವ ನಾಣ್ಯ. ಇದನ್ನು ಇನ್ನೂ ಸಂಕ್ಷಿಪ್ತವಾಗಿ ಹೇಳುವುದಾದರೆ, ಜನತೆಯ ಕೌಂಟುಂಬಿಕ ಪದವೇ ಗಾದೆಯೆನಿಸಿಕೊಳ್ಳುತ್ತದೆ'

'ನಿಜವಾದ ಗಾದೆ ರಾಷ್ಟ್ರೀಯ ಗುಣದ ಮಣ್ಣಿನಲ್ಲಿ ಬೆಳೆದ ಸಹಜ ಬೆಳೆ'

ಎಸ್.ಜಿ. ಚಾಂಪಿಯನ್ ಅವರು ತಮ್ಮ ಬೃಹತ್ ಸಂಗ್ರಹವೊಂದಕ್ಕೆ ಮುನ್ನುಡಿ ಬರೆಯುತ್ತಾ ಹೇಳಿರುವ ಮಾತುಗಳು ಇವು', 'ನನ್ನ ಅಭಿಪ್ರಾಯದಲ್ಲಿ ಗಾದೆಯೆಂದರೆ, ಜನ ಬಳಕೆಯಲ್ಲಿದ್ದು ಈಗಲೂ ಇರುವ ಉಪದೇಶಾತ್ಮಕ ಅಥವಾ ಸಲಹೆಯನ್ನು ನೀಡುವ, ನಿಜವಾದ ಅರ್ಥವನ್ನು ಮರೆಸಿ ಅಲಂಕಾರಿಕವಾಗಿ ವ್ಯಕ್ತವಾಗಿರುವ, ರೂಪಕ ಅಥವಾ ಗೂಡಾರ್ಥ ದ್ಯೂತಕವಾಗಿ ರೂಪ ಬದಲಿಸಿ ಕಾಣಿಸಿಕೊಳ್ಳುವ ಜನಾಂಗವೊಂದರ ಸೂಕ್ತಿಯೇ ಆಗಿದೆ'

ಪ್ರೊಫೆಸರ್ ವಿ.ವಿ. ಕೋಸ್ಕಿಮಯಸ್ ಹೇಳುವ ಹಾಗೆ 'ಗಾದೆಯ ಪ್ರಧಾನ ಸರ್ವೋತ್ತಮ ವೈಶಿಷ್ಟ್ಯವೆಂದರೆ ಸಾರ್ವತ್ರಿಕ ಸ್ವಿಕಾರಾರ್ಹತೆ ಅಥವಾ ಭಾವನೆಗಳ ಮತ್ತು ಆದರ್ಶಗಳ ಪ್ರಕಾಶನ ಮತ್ತು ಪ್ರತಿಫಲನ ಗುಣ, ರಾಷ್ಟ್ರದ ದೈಹಿಕ ಹಾಗೂ ಮಾನಸಿಕ ಚಕ್ಷುವಿಗೆ ಸುವ್ಯಕ್ತವಾಗಿರುವ ಗೋಚರಾಗೋಚರ ಜಗತ್ತಿನ ಸುತ್ತಲಿನ ಎಲ್ಲ ವಿಷಯಗಳನ್ನು ಅರಿತ ಅಭಿಪ್ರಾಯಗಳು ಮತ್ತು ಪರಿಶೀಲನೆಗಳು, ಅನುಮಿತಿಗಳು ಮತ್ತು ಅಂದಾಜುಗಳು'

'ಗಾದೆಯೆಂದರೆ ಕೇಂದ್ರಿಕೃತ ಸಂಕೇತಗಳ ನಾಯಕ ಕೃತಿ, ಆಯ್ದ ಮುತ್ತು, ಅತ್ಯುತ್ತಮ ನಾಜೂಕಿನ ನಾಟು ನುಡಿ ಕವಿತೆ'

'ಗಾದೆ ಮಾತುಗಳೆಂದರೆ ಅಚ್ಚುಕಟ್ಟಾದ ನಿರ್ಣಯಗಳಲ್ಲ, ವಿವೇಕ ಜಾಗೃತಿ ಮಾಡುವ ಸುಭಾಷಿತಗಳು'

'ಗಾದೆಗಳು, ಹೊಸ ಸುಭಾಷಿತಗಳ ಮಸೆಗಲ್ಲು; ವಿವೇಕದ ಒರೆಗಲ್ಲು'

ಗಾದೆಯೆಂದರೆ 'ಸತ್ಯವಿರಬಹುದಾದುದನ್ನು ಅಥವಾ ನಿತ್ಯ ಬೋಧನೆಯನ್ನು ವ್ಯಕ್ತ ಪಡಿಸುವ ವಾಡಿಕೆಯ ಚಿಕ್ಕ ವಾಕ್ಯಗಳು'

'ವ್ಯಾಖ್ಯಾನವನ್ನು ಅಪೇಕ್ಷಿಸುವ ಹೇಳಿಕೆಗಳು' ಗಾದೆಗಳೆಂದು ಹೇಳಬಹುದು'.[೧]

ಗಾದೆಗಳನ್ನು ಕುರಿತು ವಿವಿಧ ವಿದ್ವಾಂಸರು ನೀಡಿರುವ ಈ ಮೇಲಿನ ಹೇಳಿಕೆಗಳು ಗಾದೆಯನ್ನು ಕುರಿತ ಸಂಪೂರ್ಣ ಚಿತ್ರವನ್ನು ಕಟ್ಟಿಕೊಡಲಾರವು. ಆದರೂ ಆ ದಿಸೆಯಲ್ಲಿ ತಕ್ಕ ಮಟ್ಟಿನ ಪ್ರಯತ್ನ ನಡೆದಿರುವುದನ್ನು ಅಲ್ಲಗಳೆಯಲು ಸಾಧ್ಯವಿಲ್ಲ, ಗಾದೆ ಮೂಲತಃ ಅನುಭವಜನ್ಯ ಮಾತಾದ್ದರಿಂದ ಅದನ್ನು ಅನುಭವದ ಒರೆಗಲ್ಲಿನ ಮೂಲಕವೇ ಒರೆ ಹಚ್ಚಿನೋಡಬೇಕು. ಗಾದೆಯೆಂದರೆ ಸದ್ಯೋಜಾತ ನುಡಿಗಟ್ಟು; ಸೂಕ್ತ ಸಂಧರ್ಭದಲ್ಲಿ ತಾಳಿದ ನಿರ್ಣಯಗಳು. ಅಲ್ಲದೆ ಇವಕ್ಕೆ ಅನುಭವದ ಪರಿಮಿತಿ ಇರುವಂತೆ. ಅನುಭವದ ಪ್ರೀತಿಯೂ ಇರುತ್ತದೆ. ಒಂದು ಕಡೆ ಇವು ಮಾನವನ ಬುದ್ದಿ ಮತ್ತಿಕೆಗಳಾದರೆ ಮತ್ತೊಂದು ಕಡೆ ಆಲೋಚನಾ ದೀಪಿಕೆಗಳಾಗುತ್ತದೆ.

ಇಂಥ ಗಾದೆಗಳ ಪ್ರಾಮುಖ್ಯವೇನು? ಎಂಬುದನ್ನು ಗಾದೆಗಳ ಬಗ್ಗೆ ಇರುವ ಗಾದೆಗಳ ಮುಖಾಂತರ ತಿಳಿಯಬಹುದು.

---

೧. ಉದ್ಧೃತ: ರಾಗೌ. ನಮ್ಮ ಗಾದೆಗಳು, ಪು.ಸಂ. ೧೪-೧೫

ಗಾದೆ ಎಂದೂ ಸುಳ್ಳು ಹೇಳುವುದಿಲ್ಲ – ಜರ್ಮನ್

ಗಾದೆಯಲ್ಲಿ ಹುಸಿ ಇದ್ದರೆ ಹಾಲಿನಲ್ಲಿ ಹುಳಿ ಇರುತ್ತದೆ – ಮಲೆಯಾಳಂ

ಕೆಲವರು ಹೇಳಿದ್ದು ನಿಜವಿರಬಹುದು;

ಎಲ್ಲರೂ ಹೇಳಿದ್ದು ನಿಜವಿರಲೇಬೇಕು – ಇಂಗ್ಲಿಷ್

ಗಾದೆಗಳ ಬಗ್ಗೆ ಗಮನವಿಲ್ಲದವನು ತಪ್ಪುಗಳನ್ನು ತಪ್ಪಿಸಲಾರ – ತುರ್ಕಿ

ಗಾದೆ ತಿಳಿದ ವಿವೇಕಿ ಜಗಳ ಬಿಡಿಸುತ್ತಾನೆ – ಆಫ್ರಿಕನ್

ವೇದ ಸುಳ್ಳಾದರೂ ಗಾದೆ ಸುಳ್ಳಾಗುವುದಿಲ್ಲ – ಕನ್ನಡ.

"ಗಾದೆಗಳು ಒಂದು ರಾಷ್ಟ್ರದ ಸಾಮಾಜಿಕ, ಸಾಂಸ್ಕೃತಿಕ, ಜೀವನ ಚಿತ್ರವನ್ನೊಳಗೊಂಡ ಅಲಿಖಿತ ಇತಿಹಾಸ: ರಾಷ್ಟ್ರದ ಅಂತರಂಗವನ್ನು ಪ್ರತಿಬಿಂಬಿಸುವ ಕನ್ನಡಿ. ಇನ್ನೊಂದು ದೃಷ್ಟಿಯಿಂದ ಜನ ಸಾಮಾನ್ಯರ ಬಾಳನ್ನು ರೂಪಿಸುವ, ನಿಯಂತ್ರಿಸುವ ವಿಧಿ; ಶಿಕ್ಷಿಸುವ, ರಕ್ಷಿಸುವ, ಧೈರ್ಯ ತುಂಬುವ, ದಾರಿ ತೋರಿಸುವ, ಕೊನೆಗೆ ಕೈ ಹಿಡಿದು ನಡೆಸುವ ಗುರು; ತೊಂದರೆಗೆ ಸಿಕ್ಕಿದಾಗ ಸಮಾಧಾನ ಹೇಳುವ, ಸಾಂತ್ವಾನಗೊಳಿಸುವ ವಾತ್ಯಲ್ಯಮಯಿ ತಾಯಿ; ನೋವಿನ ಗಾಯವನ್ನು ಮಾಯಿಸುವ ಮದ್ದು; ಮನಸ್ಸಿನ ಮ್ಲಾನತೆ ಕಳೆಯುವ, ತೊಳೆಯುವ ಮಲಾಪಹಾರಿ,"[೧] ಇವೇ ಮುಂತಾದ ಪ್ರಾಮುಖ್ಯವನ್ನು ಗಾದೆಗಳು ಹೊಂದಿವೆ.

ಇನ್ನು ಮುಂದೆ ಗಾದೆಗಳ ಕ್ಷೇತ್ರದಲ್ಲಿ ನಡೆದಿರುವ ಕಾರ್ಯವನ್ನು ಕುರಿತು ವಿವೇಚಿಸಬಹುದು. ಈ ಕ್ಷೇತ್ರದಲ್ಲಿ ನಡೆದಿರುವ ಕಾರ್ಯವನ್ನು ಸಂಗ್ರಹ ಮತ್ತು ವಿಮರ್ಶೆ ಎಂದು ಎರಡು ಭಾಗಗಳಾಗಿ ಅಧ್ಯಯನ ಮಾಡಬಹುದು. ಗಾದೆಗಳ ಸಂಗ್ರಹ ಕಾರ್ಯ ಮೂಲತಃ ಆರಂಭವಾದುದು ಯೂರೋಪಿಯನ್ನರಿಂದ ರೆವಹಿಡ್ ಮಾರ್ಟನ್‌ರು 'ಬಂಗಾಳದ ಗಾದೆಗಳು' ಎಂಬ ಸಂಕಲನವೊಂದನ್ನು ಹೊರತಂದರು. ಕ್ರಿ.ಶ. ೧೮೩೨ರಲ್ಲಿ ಪ್ರಕಟಗೊಂಡ ಈ ಸಂಗ್ರಹ ಭಾರತೀಯ ಭಾಷೆಗಳಲ್ಲಿಯೇ ಮೊತ್ತ ಮೊದಲ ಗಾದೆಗಳ ಸಂಗ್ರಹವಾಯಿತು. ಅನಂತರ ಈ ಕೆಲಸ ಬಹಳ ಹುರುಪಿನಿಂದ ನಡೆದಿರುವುದು ಗೊತ್ತಾಗುತ್ತದೆ.

---

೧. ಸುಧಾಕರ – ನಮ್ಮ ಸುತ್ತಿನ ಗಾದೆಗಳು, ಪ್ರಸ್ತಾವನೆ, ಪು.ಸಂ. ೧೧.

೧೮೮೧ರಲ್ಲಿ ಪಿ.ಆರ್.ಟಿ. ಗುರ್ದನ್ ಅವರ 'ಕೆಲವು ಅಸಾಮೀ ಗಾದೆಗಳು' ಎಂಬ ಪುಸ್ತಕವೂ ೧೮೯೪ರಲ್ಲಿ ಜೆ.ಡಿ. ಅಪ್ರಾತಿ ಅವರ ಗಾದೆಗಳ ಸಂಕಲನವೂ ಪ್ರಕಟವಾಗಿ ಪ್ರಸಿದ್ಧವಾಗಿವೆ.

ಕನ್ನಡದಲ್ಲಿ ಈ ಕೆಲಸ ತಡವಾಗಿ ಆರಂಭವಾದರೂ ಉತ್ತಮ ಕೆಲಸ ನಡೆದಿರುವುದನ್ನು ಕಾಣಬಹುದು. ಇಲ್ಲಿಯೂ ಮಿಷನರಿಗಳಿಂದಲೇ ಈ ಕೆಲಸ ಪ್ರಾರಂಭವಾದದ್ದು. ಸುಮಾರು ೧೮೯೪ರಲ್ಲಯೇ ಬಾಸೆಲ್ ಮಿಷನ್ ಪ್ರೆಸ್ಸಿನಿಂದ ಪ್ರಕಟವಾದ ಕಿಟಲ್ ಅವರ ಕನ್ನಡ ಶಬ್ದಕೋಶದಲ್ಲಿಯೇ ಹೇರಳವಾದ ಗಾದೆಗಳನ್ನು ಕಾಣಬಹುದು. ಡಾ. ರಾಗೌ ಅವರು 'ಕಿಟಲ್ ಕೋಶದ ಗಾದೆಗಳು' (೧೯೬೯) ಎಂಬ ಸಂಗ್ರಹವನ್ನು ತಂದಿದ್ದಾರೆ. ಇದಾದ ಮೇಲೆ ಬಾಸೆಲ್ ಮಿಷನ್ ಪ್ರೆಸ್ಸಿನವರೇ 'ಕ್ರ್ಣಾಟಕ ಲೋಕೋಕ್ತಿ ನಿಧಾನ' ಎಂಬ ಗಾದೆಗಳ ಸಂಕಲನವನ್ನು ಪ್ರಕಟಪಡಿಸಿದರು.

೧೯೧೨ರಲ್ಲಿ ಹೊರಬಿದ್ದ ಇದು ಕನ್ನಡ ಗಾದೆಗಳ ಪ್ರಥಮ ಸಂಕಲನವಾಗಿದೆ. ಇದರ ಅನಂತರ ಪ್ರಕಟವಾದ ಪ್ರಮುಖವಾದ ಗಾದೆಗಳ ಸಂಗ್ರಹವೆಂದರೆ ಅಚ್ಚಪ್ಪನವರ 'ಕನ್ನಡ ಗಾದೆಗಳು' ಎಂಬುದು. ಇದು ೧೯೪೪ರಲ್ಲಿ ಪ್ರಕಟವಾಯಿತು. ಇದೇ ಲೇಖಕರ ಮತ್ತೊಂದು ಸಂಕಲನ 'ಗ್ರಂಥಸ್ಥ ಗಾದೆಗಳು'. ಇಲ್ಲಿಂದ ಮುಂದೆ ಹೆಸರಿಸಬಹುದಾದ ಕೃತಿಯೆಂದರೆ ಕೃಷ್ಣಶಾಸ್ತ್ರಿ ಜಂಗಮಕೋಟೆ ಅವರ 'ಗಾದೆಗಳ ಭಂಡಾರ ಭಾಗ – ೧' (೧೯೫೬). ಗಾದೆಗಳ ಸಂಗ್ರಹಕಾರ್ಯದಲ್ಲಿನ ಮತ್ತೊಂದು ಹೆಸರೆಂದರೆ ಟಿ.ವಿ. ವೆಂಕಟರಮಣಯ್ಯ ಅವರದು. ಇವರ ಸಂಕಲನ 'ಕನ್ನಡ ಗಾದೆಗಳ ಕೋಶ' (೧೯೬೩) ಎಂಬುದು. ಎಚ್.ಎಂ. ರಾಮಾರಾಧ್ಯಅವರು 'ಗಾದೆಗಳ ಗೀತೆಗಳು' 'ಗಾದೆಗಳ ರಾಮಾಯಣ' 'ಗಾದೆಗಳ ಮಹಾಭಾರತ' ಮುಂತಾದವನ್ನು ತಂದಿದ್ದಾರೆ. ಈಚೆಗೆ ಎಸ್.ವಿ. ಪರಮೇಶ್ವರ ಭಟ್ಟರ 'ನೆನಪಿಗೆ ಬಂದ ಗಾದೆಗಳು' (೧೯೭೨). ಸುಧಾಕರ ಅವರ 'ನಮ್ಮ ಸುತ್ತಿನ ಗಾದೆಗಳು' (೧೯೭೩), ಚೌಡೇಗೌಡ ಬೀಡನಹಳ್ಳಿಯವರ 'ಪ್ರಾದೇಶಿಕ ಗಾದೆಗಳು' (೧೯೭೩) ಬಿ.ಬಿ. ಹೆಂಡಿ ಮತ್ತು ಎಂ.ಎಸ್.ಲಠ್ಠೆಯವರ 'ಉತ್ತರ ಕರ್ನಾಟಕದ ಗಾದೆಗಳು' (೧೯೭೪) ಕಾಳೇಗೌಡ ನಾಗವಾರ ಅವರ 'ಬೀದಿ ಮಕ್ಕಳು ಬೆಳೆದೊ' ಜನಪದ ಅಕಾಡೆಮಿಯಿ 'ಗಾದೆಗಳು', ಪಿ.ಕೆ.ರಾಜಶೇಖರ ಅವರ 'ಭೂಮಿತೂಕದ ಮಾತು' ಪ್ರಕಟವಾಗಿವೆ.

ಈ ರೀತಿಯಲ್ಲಿ ಗಾದೆಗಳ ಸಂಗ್ರಹಕಾರ್ಯ ತಕ್ಕ ಮಟ್ಟಿಗೆ ನಡೆದಿದೆ. ಆದರೆ ಅವುಗಳ ಕುರಿತ ವಿಶ್ಲೇಷಣೆ, ವಿವೇಚನೆ, ವಿಮರ್ಶೆಗಳು ಅಷ್ಟು ಪ್ರಮಾಣದಲ್ಲಿ ನಡೆದಿಲ್ಲವೆಂದು ಹೇಳಬೇಕು. ಅಲ್ಲಲ್ಲಿ ಪ್ರಕಟವಾಗಿರುವ ಸಣ್ಣ, ಸಣ್ಣ ಲೇಖನಗಳ ಜೊತೆಗೆ ಕೆಲವು ವಿಮರ್ಶಾ ಗ್ರಂಥಗಳು ಬಂದಿವೆ. ಇಂಥ ಕೃತಿಗಳಲ್ಲಿ ೧೯೩೯ರಲ್ಲಿ ಪ್ರಕಟಗೊಂಡ ಕುಲಕರ್ಣಿ ಪ್ರಹ್ಲಾದರ 'ನಾಣ್ಣುಡಿ'ಯೇ ಮೊದಲನೆಯದು, ಗಾದೆಗಳ ಉಗಮ, ವಿಕಾಸ, ಸ್ವರೂಪಗಳನ್ನು ಕುರಿತು ಇಲ್ಲಿ ವಿಚಾರ ಮಾಡಲಾಗಿದೆ. ಎ.ಕೆ. ರಾಮಾನುಜನ್ ಅವರ 'ಗಾದೆಗಳು' ಎಂಬ ಪ್ರಚಾರ ಪುಸ್ತಕ ಎರಡನೆಯ ಗ್ರಂಥ. ೧೯೭೨ರಲ್ಲಿ

ಪ್ರಕಟವಾದ ನಂ. ತಪಸ್ವಿಕುಮಾರರ 'ಕನ್ನಡ ಗಾದೆಗಳ ಸಮೀಕ್ಷೆ' ಮೂರನೆಯ ವಿಮರ್ಶೆ ಗ್ರಂಥ. ಇದರಲ್ಲಿ ಗಾದೆಗಳ ಸಾಮಾನ್ಯ ತತ್ವಗಳನ್ನು ವಿವರಿಸಿರುವುದಲ್ಲದೆ, ಸಾಮಾಜಿಕ, ಸಾಂಸ್ಕೃತಿಕ, ಸಾಹಿತ್ಯಿಕ ಮೌಲ್ಯಗಳನ್ನು ವಿವೇಚಿಸಲಾಗಿದೆ.

ಗಾದೆಗಳ ಕುರಿತು ಹಲವಾರು ವಿದ್ವಾಂಸರು ಲೇಖನಗಳನ್ನು ಬರೆದಿದ್ದಾರೆ ಮಾಸ್ತಿಯವರು 'ಗಾದೆಗಳಲ್ಲಿ ನೀತಿ'. ಅಚ್ಚಪ್ಪನವರು 'ಗಾದೆಗಳು' ವೆಂಕಟರಾಯಾಚಾರ್ಯ ಅವರು 'ಕನ್ನಡ ಗಾದೆಗಳು', ಮಧುರ ಚನ್ನರು 'ಹೆಣ್ಮಕ್ಕಳ ಗಾದೆಗಳು', ಎಚ್.ಕೆ. ಮಲ್ಲಪ್ಪನವರು 'ಕನ್ನಡ ಗಾದೆಗಳ ಜೀರ್ಣೋದ್ಧಾರ' ಜೀಶಂಪ ಅವರು 'ಗ್ರಾಮ ಜೀವನದಲ್ಲಿ ಗಾದೆಗಳು' ಮುಂತಾದ ಲೇಖನಗಳನ್ನು ಬರೆದಿದ್ದಾರೆ. ಅಲ್ಲದೆ ದೇವುಡು ನರಸಿಂಹಶಾಸ್ತ್ರಿ, ಗೊರೂರು ರಾಮಸ್ವಾಮಿ ಅಯ್ಯಂಗಾರ್, ಸಿದ್ದಯ್ಯ ಪುರಾಣಿಕ, ಮಹಲಿಂಗ ದೇವರು ಮತ್ತು ಹಾ.ಮಾ. ನಾಯಕ ಅವರು ಗಾದೆಗಳ ಮೇಲೆ ತಮ್ಮ ಬರಹವನ್ನು ಮಾಡಿದ್ದಾರೆ. ಇಷ್ಟು ಕನ್ನಡ ಗಾದೆಗಳ ಕ್ಷೇತ್ರದಲ್ಲಿ ನಡೆದಿರುವ ಕಾರ್ಯವಾಗಿದೆ.

'ಜಾನಪದ ಗಾದೆಗಳಲ್ಲಿ ಸಾಮಾಜಿಕ ಮೌಲ್ಯ ಮತ್ತು ಸಾಹಿತ್ಯಿಕ ಮೌಲ್ಯ' ಎಂಬ ವಿಷಯವನ್ನು ಆರಿಸಿಕೊಂಡು ಅಧ್ಯಯನಕ್ಕೆ ತೊಡಗಿರುವ ಉದ್ದೇಶವನ್ನು ಇಲ್ಲಿ ತಿಳಿಸಬೇಕಾಗಿರುವುದು ತುಂಬ ಅಗತ್ಯವಾಗಿದೆ. ಗಾದೆಗಳನ್ನು ಅಪಾರ ಪ್ರಮಾಣದಲ್ಲಿ ಸಂಗ್ರಹಿಸಲಾಗಿದೆ. ಆದರೆ ಗಾದೆಗಳ ಸಂಗ್ರಹದ ಕಡೆ ತೋರಿದ ಗಮನ ಅವುಗಳ ವಿಶ್ಲೇಷಣೆಯ ಕಡೆ ತೋರಿಲ್ಲ. ಗಾದೆಗಳ ವಿಮರ್ಶಾ ಗ್ರಂಥವಾಗಿ ನಮಗೆ ಮುಖ್ಯವಾಗಿ ದೊರೆಯುವುದು ಕೇವಲ ಮೂರು ಕೃತಿಗಳು. ಅಲ್ಲದೆ ಕೆಲವಾರು ಲೇಖನಗಳು ಅಲ್ಲಲ್ಲಿ ಚದುರಿದಂತೆ ಇವೆ. ಈ ಕೃತಿಗಳಲ್ಲಿ ಮತ್ತು ಲೇಖನಗಳಲ್ಲಿ ಮುಖ್ಯವಾಗಿ ಕಂಡುಬರುವುದು ಎಂದರೆ ಗಾದೆಯ ಉಗಮ, ವಿಕಾಸ, ಸ್ವರೂಪ, ಲಕ್ಷಣ. ಇವೇ ಮುಂತಾದವುಗಳು ಮಾತ್ರ. ನಂ. ತಪಸ್ವಿ ಕುಮಾರರ 'ಕನ್ನಡ ಗಾದೆಗಳ ಸಮೀಕ್ಷೆ' ಕೃತಿಯಲ್ಲಿ ಗಾದೆಗಳ ಮೂಲಭೂತ ಅಂಶಗಳ ಜೊತೆಗೆ ಗಾದೆಗಳಲ್ಲಿ ಅಡಗಿರುವ ಸಾಮಾಜಿಕ, ಸಾಹಿತ್ಯಿಕ, ಸಾಂಸ್ಕೃತಿಕ ಮೌಲ್ಯಗಳನ್ನು ಕುರಿತು ವಿವೇಚನೆ ಮಾಡಲಾಗಿದೆ. ಆದರೆ ಪುಟ ಮಿತಿಗೆ ಒಳಪಟ್ಟು ಎಲ್ಲ ಗಾದೆಗಳನ್ನು ವಿವೇಚನೆಗೆ ಒಳಪಡಿಸಿಲ್ಲ. ಆದರೂ ತಪಸ್ವಿಕುಮಾರರ ಪ್ರಯತ್ನ ಶ್ಲಾಘನಾರ್ಹವಾದುದು. ಸುಧಾಕರ ಮತ್ತು ರಾ ಗೌ ಅವರು ತಮ್ಮ ಗಾದೆಗಳ ಸಂಗ್ರಹ ಗ್ರಂಥದ ಪ್ರಸ್ತಾವನೆಯಲ್ಲಿ ಗಾದೆಗಳ ಮೂಲಭೂತ ಅಂಶಗಳನ್ನು ತಿಳಿಸುವುದರ ಜೊತೆಗೆ ಇವರೂ ಗಾದೆಗಳಲ್ಲಿ ಅಡಗಿರುವ ಮೌಲ್ಯದ ವಿಚಾರವನ್ನು ಪ್ರಸ್ತಾಪಿಸಿದ್ದಾರೆ. ಆದರೆ ಅದೇ ಮುಖ್ಯ ವಿಷಯವಾಗಿ ವಿವೇಚನೆಗೆ ಒಳಪಟ್ಟಿಲ್ಲ.

ಈ ಎಲ್ಲ ಕಾರಣಗಳಿಂದ ನಾನು 'ಜಾನಪದ ಗಾದೆಗಳಲ್ಲಿ ಸಾಮಾಜಿಕ ಮೌಲ್ಯ ಮತ್ತು ಸಾಹಿತ್ಯಿಕ ಮೌಲ್ಯ' ಎಂಬ ವಿಷಯವನ್ನು ಆರಿಸಿಕೊಂಡು ಅಧ್ಯಯನಕ್ಕೆ ತೊಡಗಿದ್ದೇನೆ. 'ಗಾದೆಗಳಲ್ಲಿ ಅಡಗಿರುವ

ಸಾಮಾಜಿಕ ಮೌಲ್ಯ ಮತ್ತು ಸಾಹಿತ್ಯಿಕ ಮೌಲ್ಯವನ್ನು ಗಾದೆಗಳ ಮುಖಾಂತರವೇ ವಿವೇಚಿಸಿ, ವಿಮರ್ಶೆಗೆ ಒಳಪಡಿಸುವ ಪ್ರಯತ್ನ ಇಲ್ಲಿ ಇದೆ.

ಪ್ರಸ್ತುತ ಅಧ್ಯಯನ ವ್ಯವಸ್ಥಿತವಾಗಿ ನಡೆಯಲು ಈ ಕೆಳಕಂಡಂತೆ ಅಧ್ಯಾಯಗಳನ್ನು ರೂಪಿಸಿಕೊಂಡಿದೆ.

೧. ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ.

೨. ಸಾಮಾಜಿಕ ಮೌಲ್ಯ: ಒಂದು ವಿವೇಚನೆ.

೩. ಸಾಹಿತ್ಯಿಕ ಮೌಲ್ಯ: ಒಂದು ವಿವೇಚನೆ.

೪. ಜಾನಪದ ಗಾದೆಗಳಲ್ಲಿ ಸಾಮಾಜಿಕ ಮೌಲ್ಯ

೫. ಜಾನಪದ ಗಾದೆಗಳಲ್ಲಿ ಸಾಹಿತ್ಯಿಕ ಮೌಲ್ಯ.

೬. ಉಪಸಂಹಾರ.

ಮೊದಲನೆ ಅಧ್ಯಾಯದಲ್ಲಿ ಪೀಠಿಕೆಯಿಂದ ಹಿಡಿದು ಗಾದೆ ಎಂದರೇನು? ಗಾದೆಯ ಸ್ವರೂಪ, ಗಾದೆಯ ಲಕ್ಷಣ. ಗಾದೆಯ ಪ್ರಾಮುಖ್ಯತೆ, ಗಾದೆ ಕ್ಷೇತ್ರದಲ್ಲಿ ನಡೆದಿರುವ ಕಾರ್ಯ, ಅದರಲ್ಲಿ ಸಂಗ್ರಹಿತ ಗ್ರಂಥಗಳು ಮತ್ತು ವಿಮರ್ಶಾಗ್ರಂಥ, ಲೇಖನಗಳನ್ನು ಆಂಶಿಕವಾಗಿ ತಿಳಿಸುವುದರ ಜೊತೆಗೆ ಈ ವಿಷಯವನ್ನು ನಿಬಂಧ ರಚನೆಗೆ ಆಯ್ಕೆ ಮಾಡಿಕೊಂಡುದರ ಉದ್ದೇಶ ಮತ್ತು ವ್ಯಾಪ್ತಿಯನ್ನು ತಿಳಿಸಲಾಗಿದೆ. ಎರಡನೆಯ ಅಧ್ಯಾಯದಲ್ಲಿ ಸಾಮಾಜಿಕ ಮೌಲ್ಯ ಎಂದರೇನು? ಎಂಬುದನ್ನು ಪ್ರಸ್ತಾಪನೆಯ ರೂಪದಲ್ಲಿ ವಿವರಿಸುವ ಪ್ರಯತ್ನ ಮಾಡಲಾಗಿದೆ. ಮೂರನೆಯ ಅಧ್ಯಾಯದಲ್ಲಿ ಸಾಹಿತ್ಯಿಕ ಮೌಲ್ಯ ಎಂದರೇನು? ಎಂಬುದನ್ನು ಪ್ರಸ್ತಾವನೆಯ ರೂಪದಲ್ಲಿ ವಿವರಿಸುವ ಪ್ರಯತ್ನ ಮಾಡಲಾಗಿದೆ. ನಾಲ್ಕನೇ ಅಧ್ಯಾಯದಲ್ಲಿ ಜಾನಪದ ಗಾದೆಗಳಲ್ಲಿ ಅಡಗಿರುವಂತಹ ಸಾಮಾಜಿಕ ಮೌಲ್ಯವನ್ನು ತಿಳಿಸುವ ಪ್ರಯತ್ನ ಮಾಡಲಾಗಿದೆ. ಹಾಗೆಯೇ ಐದನೆಯ ಅಧ್ಯಾಯದಲ್ಲಿ ಜಾನಪದ ಗಾದೆಗಳಲ್ಲಿ ಅಡಗಿರುವ ಸಾಹಿತ್ಯಿಕ ಮೌಲ್ಯವನ್ನು ವಿವರಿಸಲಾಗಿದೆ. ಆರನೇ ಅಧ್ಯಾಯದಲ್ಲಿ ಒಟ್ಟಾರೆಯಾಗಿ ಅಧ್ಯಯನದ ಫಲಿತಗಳನ್ನು ಉಪಸಂಹಾರ ರೂಪದಲ್ಲಿ ಎಂಬ ೬ನೇಯ ಅಧ್ಯಾಯದಲ್ಲಿ ಚರ್ಚಿಸಿ ಒದಗಿಸಲಾಗಿದೆ.

## ೨. ಸಾಮಾಜಿಕ ಮೌಲ್ಯ : ಒಂದು ವಿವೇಚನೆ

ಒಂದು ದೇಶದ ನಿಜವಾದ ಇತಿಹಾಸವೆಂದರೆ ಅದು ಅ ದೇಶದಲ್ಲಿ ವಾಸಿಸುತ್ತಿದ್ದ ಜನತೆಯ ಇತಿಹಾಸವಾಗಿರುತ್ತದೆ. ಜನತೆ ಬದುಕಿದ ರೀತಿ, ಅನುಸರಿಸಿದ ಧರ್ಮ, ಕಟ್ಟಿದ ಕಲೆ, ಅದರ ಜೀವನ ಸಮಸ್ಯೆಗಳು ಅದರ ಜೀವನ ಮೌಲ್ಯಗಳು ಇತ್ಯಾದಿಗಳ ವಿವರಣೆಯೇ ಆ ದೇಶದ ಇತಿಹಾಸ. ಜನತೆಯ ಜೀವನವನ್ನು ಕುರಿತಾದ ಇಂತಹ ಅಧ್ಯಯನವನ್ನು ಸಾಮಾಜಿಕ ಅಧ್ಯಯನವೆಂದೋ ಸಾಂಸ್ಕೃತಿಕ ಅಧ್ಯಯನವೆಂದೋ ಕರೆಯಬಹುದು. ಹಾಗೆ ನೋಡಿದರೆ ಸಾಮಾಜಿಕ ಅಧ್ಯಯನವು ಸಾಂಸ್ಕೃತಿಕ ಅಧ್ಯಯನದ ಒಂದು ಭಾಗ ಮಾತ್ರ. ಆದುದರಿಂದ ಸಾಂಸ್ಕೃತಿಕ ಮತ್ತು ಸಾಮಾಜಿಕ ಅಧ್ಯಯನಗಳು ಒಂದಕ್ಕೊಂದು ಸಂಬಂಧವನ್ನು ಹೊಂದಿವೆ.

ಸಾಮಾಜಿಕ ಮೌಲ್ಯ ಎಂಬುದು Social Value ಎಂಬುದಕ್ಕೆ ಸಂವಾದಿಯಾಗಿದೆ. ಸಾಮಾಜಿಕ ಮೌಲ್ಯ Social Value ಎಂಬ ಅರ್ಥದಲ್ಲೇ ಅಧಿಕವಾಗಿ ಬಳಕೆಯಾಗುತ್ತಿದೆ. ಸಮಾಜವನ್ನು ಸೂಕ್ತವು, ಸಕಾರಾತ್ಮಕವೂ ಆದ ರೀತಿಯಲ್ಲಿ ಮುನ್ನಡೆಸುವ ಸಾಮಾಜಿಕ ವಿಚಾರಗಳನ್ನು ಸ್ಥೂಲವಾಗಿ ಸಾಮಾಜಿಕ ಮೌಲ್ಯಗಳು ಎಂದು ಕರೆಯಬಹುದು.

ಮನುಷ್ಯನು ಪ್ರಾಣಿಗಳಲ್ಲಿ ಒಬ್ಬನಾದರೂ ತಾನು ಪ್ರಾಣಿಗಳಿಗಿಂತ ಭಿನ್ನ ಎಂದು ಹೇಳಿಕೊಳ್ಳುತ್ತಾನೆ. ಹಾಗಾದರೆ ಅವನು ಪ್ರಾಣಿಗಳಿಗಿಂತ ಬೇರೆ ಎಂದು ತೋರಿಸುವ ಅಂಶ ಯಾವುದು? ಪ್ರಾಣಿಗಳಿಗೆ ಬುದ್ಧಿಯಿಲ್ಲ. ಅವುಗಳಲ್ಲಿ ಸಾಮಾಜಿಕ ಒಕ್ಕೂಟವಿಲ್ಲ. ವಾಕ್‌ಶಕ್ತಿಯಿಲ್ಲ. ಇಷ್ಟೂ ಮನುಷ್ಯನಿಗೆ ಇದೆ ಎಂದು ಹೇಳಬಹುದಾದರೂ ಮನುಷ್ಯನನ್ನು ಪ್ರಾಣಿಗಳಿಂದ ಬೇರ್ಪಡಿಸಬಲ್ಲ ಅಂಶವನ್ನು ಒಂದು ಮಾತಿನಲ್ಲಿ ಹೇಳಬಹುದು. ಅದೇ ಸಂಸ್ಕೃತಿ. ಮನುಷ್ಯನಿಗೆ ಸಂಸ್ಕೃತಿಯುಂಟು ಪ್ರಾಣಿಗಳಿಗೆ ಸಂಸ್ಕೃತಿಯಿಲ್ಲ. ಸಂಸ್ಕೃತಿಯು ಒಂದು ಸಾಮಾಜಿಕ ಮೌಲ್ಯ.

ಅತ್ಯುತ್ತಮ ಆಲೋಚನೆಗಳನ್ನೂ ಉಕ್ತಿಗಳನ್ನೂ ತಿಳಿಸುವುದು ಸಾಮಾಜಿಕ ಮೌಲ್ಯಗಳೇ. ಆದರೆ ಅಷ್ಟು ಸಾಲದು. ನಾವು ಎಷ್ಟೋ ಬಾರಿ ಯಾಂತ್ರಿಕವಾಗಿ ಕೆಲವು ಭಾವನೆಗಳನ್ನು ಪದ್ಧತಿಗಳನ್ನೂ ಅನುಸರಿಸುತ್ತಿರುತ್ತೇವೆ. ನಾವು ಅರಿತ ಆಲೋಚನೆಗಳೂ ಉಕ್ತಿಗಳೂ ನಮ್ಮ ಭಾವನೆ ಮತ್ತು ಪದ್ಧತಿಗಳ ಮೇಲೆ ಬೆಳಕು ಬೀರಬೇಕು. ನಮ್ಮನ್ನ ನಾವು ತಿದ್ದಿಕೊಳ್ಳಲು ಸಹಾಯ ಮಾಡಬೇಕು. ಹೀಗೆ ನಮ್ಮನ್ನು ನಾವು ಉತ್ತಮಗೊಳಿಸಿಕೊಳ್ಳಲು ಇರುವ ಅಂಶಗಳೇ ಸಾಮಾಜಿಕ ಮೌಲ್ಯಗಳು. ಅದು ಹೆಚ್ಚು ಆನಂದ ಹೆಚ್ಚು ಬೆಳಕು, ಹೆಚ್ಚು ಬಾಳು, ಹೆಚ್ಚು ಅನುಕಂಪ – ಇವುಗಳನ್ನೇ ಪ್ರಧಾನ ಲಕ್ಷಣವಾಗಿ ಉಳ್ಳ

ಆಂತರಂಗಿಕವಾದ, ಆತ್ಮ ಸಂಬಂಧಿಯಾದ ಕ್ರಿಯೆ, ಇದನ್ನು ಹೃದಯದ ಒಲವು ಬುದ್ಧಿಯ ಬೆಳಕು ಎಂಬ ಎರಡು ಮಾತುಗಳಿಂದ ನಿರ್ದೇಶಿಸಬಹುದು.

ಸಂಸ್ಕೃತಿ ಮತ್ತು ಸಾಮಾಜಿಕ ಅಧ್ಯಯನಗಳು ಒಂದರೊಳಗೊಂದು ಅಡಕವಾಗಿರುವುದರಿಂದ ಸಂಸ್ಕೃತಿ ಎಂದರೇನು? ಎಂಬುದನ್ನು ತಿಳಿದರೆ ಪರೋಕ್ಷವಾಗಿ ಸಾಮಾಜಿಕ ಮೌಲ್ಯದ ಅಂಶಗಳನ್ನು ತಿಳಿಯಬಹುದು. ಹೇಗೆಂದರೆ ಸಂಸ್ಕೃತಿಯ ಅಂಗವೇ ಸಾಮಾಜಿಕ ಮೌಲ್ಯ. ಆರ್ನಾಲ್ಡ್‌ನ 'ಸಂಸ್ಕೃತಿ'ಯು ಬಹುಮಟ್ಟಿಗೆ ವ್ಯಕ್ತಿಗತವಾಗಿದೆ. ವ್ಯಕ್ತಿಯ ವಿಕಾಸಕ್ಕೆ ಸಂಬಂದಿಸಿದೆ. ಎಮರ್ಸನ್ನನ ಅಭಿಪ್ರಾಯಗಳು ಬಹುಮಟ್ಟಿಗೆ ಇವನ ಅಭಿಪ್ರಾಯಗಳನ್ನೇ ಹೋಲುತ್ತವೆ. ಎಮರ್ಸನ್ನನು ತನ್ನ `Culture' ಎಂಬ ಪ್ರಬಂಧದಲ್ಲಿ ವ್ಯಕ್ತಿಯು ಸುಸಂಸ್ಕೃತನಾದರೆ ಅವನು ಯಾವ ಮಾರ್ಗಗಳನ್ನು ಅನುಸರಿಸಬೇಕು – ಸುಸಂಸ್ಕೃತನ ಲಕ್ಷಣಗಳೇನು ಎಂಬ ವಿಷಯಗಳನ್ನೇ ಉದ್ದಕ್ಕೂ ಪ್ರತಿಪಾದಿಸಿಕೊಂಡು ಹೋಗಿದ್ದಾನೆ. ರವೀಂದ್ರನಾಥ ಠಾಕೂರರ ಅಭಿಪ್ರಾಯಗಳೂ ಬಹುಮಟ್ಟಿಗೆ ಈ ಗುಂಪಿಗೆ ಸೇರುತ್ತವೆ. ಅವರು `Civilization' ಎಂಬ ಪದವನ್ನು ಸಂಸ್ಕೃತಿ ಎಂಬ ಅರ್ಥದಲ್ಲಿ ಬಳಿಸಿದ್ದಾರೆ. ಸಂಸ್ಕೃತಿ ಎಂಬುದು ಒಂದು ಆಕಾರವನ್ನು ತಳೆದು ನಿಂತ ಆಕಸ್ಮಿಕ ಘಟನೆಗಳ ಮೊತ್ತವಲ್ಲ ನಮ್ಮ ಪೂರ್ಣತೆಗಾಗಿ ರೂಪಿಸಿಕೊಂಡ ಯಾವುದೋ ದಿವ್ಯಾದರ್ಶದ ಅಭಿವ್ಯಕ್ತಿ. ಇದಕ್ಕೆ ಸಮಾನವಾದ ಭಾರತೀಯ ಪದ 'ಧರ್ಮ' ಮನುಷ್ಯ ನಿಜವಾಗಿ ಏನಾಗಿದ್ದಾನೆಯೋ ಅದರ ಅತ್ಯುತ್ತಮ ಅಭಿವ್ಯಕ್ತಿಯೇ ಧರ್ಮ. ಮನುಷ್ಯನ ಸಾಂಘಿಕ ಜೀವನದಲ್ಲಿ ಅಭಿವ್ಯಕ್ತಗೊಂಡ ಧರ್ಮವೇ ಸಂಸ್ಕೃತಿ. ಜೀವನಾದರ್ಶಗಳನ್ನು ಮೌಲ್ಯಗಳನ್ನು ನಮ್ಮ ಮುಂದಿಡುವುದು ಸಂಸ್ಕೃತಿಯ ಘನೋದ್ದೇಶಗಳಲ್ಲೊಂದು. ಎಲ್ಲಿ ಸರಳವಾದ ರೂಪದಲ್ಲಿ ಆಧ್ಯಾತ್ಮವು ಅಭಿವ್ಯಕ್ತವಾಗುವುದೋ ಅಲ್ಲಿ ಸಂಸ್ಕೃತಿಯು ಅತ್ಯುತ್ತಮ ರೂಪದಲ್ಲಿ ಸೃಷ್ಟಿಯಾಯಿತೆಂದು ಭಾವಿಸಬೇಕು. ಠಾಕೂರರೇ ಇನ್ನೊಂದೆಡೆ ಸಂಸ್ಕೃತಿಯನ್ನು 'ಮನೋಮಯ ಜೀವನ' ಎಂದು ಕರೆದಿದ್ದಾರೆ.

ಟಿ.ಎಸ್. ಎಲಿಯಟ್ಟನ ವಾದವು ಸ್ವಲ್ಪ ಭಿನ್ನವಾದುದು. ಅವನ ಪ್ರಕಾರ ಸಂಸ್ಕೃತಿ ಎಂಬುದು ಒಬ್ಬ ವ್ಯಕ್ತಿಯಲ್ಲಿ ಕಂಡುಬರುವುದಕ್ಕಿಂತ ಹೆಚ್ಚಾಗಿ ಒಂದು ಸಮಾಜದ ಅಥವಾ ಗುಂಪಿನ 'ಜೀವನ ವಿಧಾನ' ದಲ್ಲಿ ಕಂಡುಬರುತ್ತದೆ. ಸಂಸ್ಕೃತಿ ಎಂಬುದು ಒಂದು ಜನಾಂಗದ ಸಮಸ್ತ ಕ್ರಿಯೆಗಳನ್ನು ಅಭಿರುಚಿಗಳನ್ನು ಒಳಗೊಳ್ಳುತ್ತದೆ. ವ್ಯಕ್ತಿಗಳು ಏನಿದ್ದರೂ ಆ ಸಂಸ್ಕೃತಿಯನ್ನು ಮುಂದಿನ ಜನಾಂಗಕ್ಕೆ ಹರಿಯಿಸುತ್ತಾರೆ. ಉತ್ತಮರಾದವರು ತಮ್ಮ ಚಟುವಟಕೆಗಳಿಂದ ಆ ಸಂಸ್ಕೃತಿಯ ಪ್ರಗತಿಗೆ ಕಾರಣರಾಗುತ್ತಾರೆ. ಅವನ ವಾಕ್ಯಗಳು ಇವು "ಮೊದಲನೆಯದಾಗಿ ಮಾನವ ಶಾಸ್ತ್ರಜ್ಞರನ್ನು ಅನುಸರಿಸಿ ಹೀಗೆ ಹೇಳಬಹುದು. ಒಂದು ಪ್ರದೇಶದಲ್ಲಿ ವಾಸಿಸುತ್ತಿರುವ ಒಂದು ಜನಾಂಗದ ಜೀವನ ವಿಧಾನವೇ ಸಂಸ್ಕೃತಿ. ಈ ಸಂಸ್ಕೃತಿಯು ಅವರ ಕಲೆಗಳಲ್ಲಿ ಸಾಮಾಜಿಕ ವ್ಯವಸ್ಥೆಯಲ್ಲಿ ಅವರ ಆಚಾರ ವ್ಯವಹಾರಗಳ್ಲಲಿ ಧರ್ಮದಲ್ಲಿ ವ್ಯಕ್ತವಾಗುತ್ತದೆ.

ಆದರೆ ಇವೆಲ್ಲವನ್ನು ಒಟ್ಟಿಗೆ ಸೇರಿಸಿದರೂ ಅದು ಸಂಸ್ಕೃತಿ ಆಗಲಾರದು. ಮನುಷ್ಯನ ದೇಹವನ್ನು ಹೇಗೋ ಹಾಗೆ ಆ ಜನಾಂಗದ ಕಲೆಗಳ ಸಂಪ್ರದಾಯಗಳ ಧಾರ್ಮಿಕ ಶ್ರದ್ಧೆಗಳ ಮೊತ್ತವೇ ಸಂಸ್ಕೃತಿ ಆಗಲಾರದು. ಇವು ಒಂದರ ಮೇಲೊಂದು ಪ್ರಭಾವವನ್ನು ಬೀರುತ್ತವೆ. ಒಂದನ್ನು ಅರಿಯಲು ಎಲ್ಲವನ್ನು ಅರಿಯಬೇಕು. ಶ್ರೇಷ್ಠ ಸಂಸ್ಕೃತಿಗಳಿರುವಂತೆ ಶ್ರೇಷ್ಠವಲ್ಲದ ಸಂಸ್ಕೃತಿಗಳೂ ಉಂಟು. ಒಂದು ಸಮಾಜದಲ್ಲಿಯೇ ಶ್ರೇಷ್ಠ ಸಂಸ್ಕೃತಿಗೆ ಮತ್ತು ಶ್ರೇಷ್ಠವಲ್ಲದ ಸಂಸ್ಕೃತಿಗೆ ಸೇರಿದ ವರ್ಗಗಳನ್ನು ಗುರುತಿಸಬಹುದು. ಹಾಗೆಯೇ ಅತ್ಯಂತ ಸುಸಂಸ್ಕೃತರಾದ ವ್ಯಕ್ತಿಗಳಿರುವರೆಂದೂ ಹೇಳಬಹುದು. ಒಬ್ಬ ಕಲಾವಿದನ ಅಥವಾ ತತ್ತ್ವಜ್ಞನ ಸಂಸ್ಕೃತಿಯು ಒಬ್ಬ ಗಣಿ ಕೆಲಸದವನ ಅಥವಾ ರೈತನ ಸಂಸ್ಕೃತಿಯಿಂದ ಸ್ವಲ್ಪ ಭಿನ್ನ! ಆದರೆ ಒಂದು ಆರೋಗ್ಯಕರವಾದ ಸಮಾಜದಲ್ಲಿ ಇವೆಲ್ಲವೂ ಒಂದೇ ಸಂಸ್ಕೃತಿಯ ಅಂಗಗಳು. ಕಲಾವಿದ, ಕವಿ, ತತ್ತ್ವಜ್ಞಾನಿ, ರಾಜಕಾರಣಿ, ಶ್ರಮಜೀವಿ – ಇವರೆಲ್ಲರಿಗೆ ಒಂದು ಸಮಾನವಾದ ಸಂಸ್ಕೃತಿ ಇರುತ್ತದೆ. ಬೇರೆ ದೇಶಗಳಲ್ಲಿ ಅದೇ ವೃತ್ತಿಗಳನ್ನು ಕೈಗೊಂಡಿರುವ ಜನರ ಸಂಸ್ಕೃತಿಯೂ ಈ ಸಂಸ್ಕೃತಿಯೂ ಒಂದೇ ಆಗಿರುವುದಿಲ್ಲ.

ಟಿ.ಎಸ್.ಎಲಿಯಟ್ಟನ ವಿವರಣೆಯು ಅವನೇ ಹೇಳಿಕೊಂಡಿರುವಂತೆ ಬಹುಮಟ್ಟಿಗೆ ಮಾನವ ಶಾಸ್ತ್ರಜ್ಞರನ್ನು ಅನುಸರಿಸಿದೆ. ಮನುಷ್ಯನು ವಂಶಾನುಗತವಾದ ಕೆಲವು ಲಕ್ಷಣಗಳೊಡನೆ ಶಕ್ತಿಗಳೊಡನೆ ಹುಟ್ಟುತ್ತಾನೆ. ಇವುಗಳನ್ನು ಯಾರೂ ಅವನಿಗೆ ಕಲಿಸಿಕೊಡಬೇಕಾಗಿಲ್ಲ. ಆದರೆ ಇನ್ನು ಕೆಲವನ್ನು ಅವನಿಗೆ ಕಲಿಸಿಕೊಡಬೇಕಾಗುತ್ತದೆ. ಅಥವಾ ತನ್ನ ಪರಿಸರಣದಿಂದ ಅವನೇ ಕಲಿತುಕೊಳ್ಳುತ್ತಾನೆ. ಉದಾಹರಣೆಗೆ ಮನೆಕಟ್ಟುವುದು, ಭಾಷೆ, ವಸ್ತ್ರಗಳ ಉಪಯೋಗ, ವ್ಯವಸಾಯ, ಸಂಪ್ರದಾಯಗಳು – ಇತ್ಯಾದಿಗಳು ಇವು ಹುಟ್ಟಿನೊಡನೆ ವ್ಯಕ್ತಿಯಿಂದ ವ್ಯಕ್ತಿಗೆ ಹರಿಯುವುದಿಲ್ಲ. ಮನೆ ಕಟ್ಟುವುದನ್ನೇ ತೆಗೆದುಕೊಂಡರೆ, ಪಕ್ಷಿಗಳಿಗೆ ಅದು ಹುಟ್ಟಿನೊಡನೆ ಸ್ವಭಾವಸಿದ್ಧವಾಗಿ ಬರುತ್ತದೆ. ಒಂದು ಸಾವಿರ ವರ್ಷಗಳ ಹಿಂದೆ ಪಕ್ಷಿಗಳು ಹೇಗೆ ಗೂಡು ಕಟ್ಟುತ್ತಿದ್ದವೋ ಹಾಗೆ ಈಗಲೂ ಗೂಡುಕಟ್ಟುತ್ತದೆ. ಮನುಷ್ಯನಲ್ಲಾದರೋ. ಅವನು ತನ್ನ ಪರಿಸರಣದಿಂದ ಅದನ್ನು ಕಲಿತುಕೊಳ್ಳುತ್ತಾನೆ. ಉತ್ತಮಗೊಳಿಸುತ್ತಾ ಹೋಗುತ್ತಾನೆ. ಹೀಗೆ ಹುಟ್ಟಿನಿಂದ ಬಾರದೆ. ಮನುಷ್ಯ ನನ್ನ ಪರಿಸರಣದಿಂದ ಕಲಿತುಕೊಳ್ಳುವ ಭಾಷೆ, ಉಪಕರಣಗಳ ತಯಾರಿಕೆ. ಕೈಗಾರಿಕೆ, ಕಲೆ, ವಿಜ್ಞಾನ, ಕಾನೂನು, ಆಡಳಿತ, ನೀತಿ ಮತ್ತು ಧರ್ಮ – ಇತ್ಯಾದಿಗಳೆಲ್ಲವನ್ನೂ ಒಳಗೊಳ್ಳುತ್ತದೆ ಸಂಸ್ಕೃತಿ. ಆದ್ದರಿಂದ ಸಂಸ್ಕೃತಿ ಎಂದರೆ ಒಂದು ಸಮಾಜದ ಜೀವನ ವಿಧಾನ. ಅದರ ಆಚಾರ ವ್ಯವಹಾರಗಳು, ಅದರ ಸಂಸ್ಥೆಗಳು, ಆಲೋಚನಾ ವಿಧಾನಗಳು ಪ್ರತಿಯೊಬ್ಬ ವ್ಯಕ್ತಿಯೂ ಪ್ರಪಂಚವನ್ನು ಸ್ವತಂತ್ರವಾಗಿ ನೋಡಲಾರ. ಅವನ ಸಮಾಜದ ಆಲೋಚನಾ ವಿಧಾನಗಳೂ ಆಚಾರ ವ್ಯವಹಾರಗಳೂ

ಸಂಪ್ರದಾಯಗಳೂ ಅವನ ದೃಷ್ಟಿಯನ್ನು ನಿಯಂತ್ರಿಸುತ್ತವೆ ಮಾರ್ಪಡಿಸುತ್ತವೆ. ಹೀಗೆ ಮನುಷ್ಯ ಬಹುಮಟ್ಟಿಗೆ ತಾನು ಹುಟ್ಟಿ ಬೆಳೆದ ಸಂಸ್ಕೃತಿಯ ಶಿಶುವೆಂದು ಹೇಳಬಹುದು.

ಸಾಮಾಜಿಕ ಮೌಲ್ಯ ಎಂದಾಗ ಸಮಾಜದಲ್ಲಿ ಇರಬಹುದಾದ ಪ್ರತಿಯೊಂದು ಅಂಶವೂ ಪ್ರಮುಖವಾಗುತ್ತದೆ. ಸಮಾಜ ಎಂದರೆ ಮಾನವ ವಾಸಿಸುವ ಪ್ರದೇಶ ಮತ್ತು ಅದರ ಸುತ್ತಮುತ್ತಣ ಪರಿಸರ. ಮಾನವ ಪ್ರಮುಖವಾಗಿ ಸಮಾಜ ಜೀವಿ. ಅವನ ಜೀವನ ನಡೆಯುವುದೇ ಸಮಾಜದ ಪರಿಧಿಯೊಳಗೆ. ಹೀಗೆ ಮಾನವ ಸಮಾಜದಲ್ಲಿ ಜೀವನ ಮಾಡುವಾಗ ಹಲವಾರು ನಿಯಮ ನಿಬಂಧನೆಗಳನ್ನು, ಕಟ್ಟುಪಾಡುಗಳನ್ನು, ಆಚಾರ, ವ್ಯವಹಾರಗಳನ್ನು, ಸಂಪ್ರದಾಯ ಉತ್ಸವಗಳನ್ನು, ಆಚರಣೆ ಮೆರವಣಿಗೆಗಳನ್ನು ಕಟ್ಟಡಗಳನ್ನು ನಿರ್ಮಿಸಿಕೊಂಡಿದ್ದಾನೆ. ಈ ಎಲ್ಲಾ ಅಂಶಗಳೂ ಸಾಮಾಜಿಕ ಮೌಲ್ಯಗಳಾಗಿವೆ.

ಸಮಾಜದ ಪ್ರಾಥಮಿಕ ಹಂತ ಕುಂಟುಂಬ. ಒಂದು ಸಂಸಾರ. ಮಕ್ಕಳು ಈ ಕುಟುಂಬದಲ್ಲಿ ಇರುತ್ತಾರೆ. ಪುರುಷನೇ ಪ್ರಧಾನ ಆದುದರಿಂದ ಇದನ್ನು ಪಿತೃಪ್ರಧಾನ ಕುಟುಂಬ. ಪುರುಷ ಪ್ರಧಾನ ಸಮಾಜ ಎಂದು ಕರೆಯಲಾಗುತ್ತದೆ. ಇವನೇ ಪ್ರಮುಖ. ಇವನ ಆಶಯದಂತೆ ಕಾರ್ಯ ಚಟುವಟಿಕೆ ನಡೆಯಬೇಕು. ಎರಡನೇ ಸ್ಥಾನ ಗೃಹಿಣಿಗೆ. ನಾಲ್ಕುಗೋಡೆಯ ಮಧ್ಯೆ ಬಂಧಿತಳು, ಅವಕಾಶ ವಂಚಿತಳು. ಈ ರೀತಿಯಾಗಿ ಕುಟುಂಬದ ಸ್ಥಿತಿ ಗತಿ ಅಡಗಿದೆ. ಅನಂತರದ ಹಂತಗಳೆಂದರೆ ಗ್ರಾಮ, ಗ್ರಾಮದ ಇತರ ಅಂಶಗಳು. ಮನುಷ್ಯನ ಜನನದಿಂದ ಹಲವಾರು ಆಚರಣೆಗಳು ಆರಂಭವಾಗಿ ಸಾವಿನವರೆಗೂ ನಡೆದು ಅಂತ್ಯವಾಗುತ್ತವೆ. ಹಲವಾರು ಹಬ್ಬಗಳು, ಜಾತ್ರೆಗಳು ಉತ್ಸವಗಳು ಇಲ್ಲಿಯ ಆಚರಣೆಗಳು, ದೇವಸ್ಥಾನಗಳು, ಸರ್ವಕಾರ್ಯಗಳ ಕೇಂದ್ರಸ್ಥಾನ ದೇವಸ್ಥಾನಗಳು, ವಿದ್ಯಾಕೇಂದ್ರ, ಹಬ್ಬದ ಮೂಲ, ನ್ಯಾಯದ ಕಟ್ಟೆಯಾಗಿಯೂ ಕಾರ್ಯ ನಿರ್ವಹಿಸುತ್ತದೆ.

ಸ್ತ್ರೀ ಸಮಾಜದಲ್ಲಿ ಸರಿಯಾದ ಪ್ರಮಾಣದಲ್ಲಿ ಸ್ಥಾನಮಾನ ನೀಡಿಲ್ಲ. ಆಕೆಯನ್ನು ಕೇವಲ ಒಂದು ದುಡಿಯುವ ಯಂತ್ರ, ಸುಖ ನೀಡುವ ವಸ್ತು ಎಂದು ಭಾವಿಸಲಾಗಿದೆ. ಆಕೆ ಬಾಲ್ಯ, ಯೌವನ ಮುಪ್ಪಿನಲ್ಲಿ ಯಾರ್‍ಯಾರ ಆಶ್ರಯದಲ್ಲಿರಬೇಕು ಎಂಬುದನ್ನು ತಿಳಿಸಿ. ಅಡಿಯಾಳನ್ನಾಗಿ ಮಾಡಿದೆ. ಸ್ತ್ರೀಯರು ಧರ್ಮವನ್ನು ಅನುಸರಿಸಬಾರದು. ರಾಜಕೀಯದಲ್ಲಿ ಪಾಲ್ಗೊಳ್ಳಬಾರದು. ವಿದ್ಯಾಭ್ಯಾಸ ನಿಷಿದ್ಧ ಇವೇ ಮುಂತಾದ ಕಟ್ಟುಪಾಡುಗಳನ್ನು ಒಳಗೊಂಡಿದೆ. ವಿಧವಾ ವಿವಾಹ ಪುನರ್ವಿವಾಹದ ಸ್ವಾತಂತ್ರ್ಯವನ್ನು ನೀಡಿಲ್ಲ.

ಸಮಾಜದಲ್ಲಿ ಹಲವಾರು ಜಾತಿ ಪದ್ಧತಿಗಳಿದ್ದು, ಆಯಾ ಜಾತಿಯವರ ಕೆಲಸ ಕರ್ತವ್ಯಗಳನ್ನು ತಿಳಿಸಿದೆ. ಅವರ ಸ್ಥಾನಮಾನ, ಅಂತಸ್ತು, ಅದನ್ನು ಹೊಂದುವ ಬಗೆ, ಪರಸ್ಪರ ನಡಾವಳಿ ಅವರಿಗೇ ಮೀಸಲಾದ ಸ್ಥಳ, ದೇವಾಲಯ ಇವೇ ಮುಂತಾದವನ್ನು ತಿಳಿಸಲಾಗಿದೆ.

ಸಮಾಜದಲ್ಲಿ ಹಲವು ಜಾತಿಯವರಿಗೆ ಹಲವಾರು ದೇವರು, ದೇವಾಸ್ಥಾನಗಳಿದ್ದು ಅವರದೇ ಆದ ಹಲವಾರು ಸಂಪ್ರದಾಯ, ಉತ್ಸವಗಳು ಇವೆ. ಬೇರೆ ಬೇರೆ ಕಾಲಾವಧಿಯಲ್ಲಿ ಬೇರೆ ಬೇರೆ ರೀತಿಯ ಉತ್ಸವ ನಡೆಸುವುದಲ್ಲದೆ ಹಲವು ವಿಧಿ ವಿಧಾನಗಳನ್ನು ವಿಧಿಸುತ್ತವೆ. ಹೀಗೆ ಸಮಾಜವು ಹಲವಾರು ವಿಷಯಗಳನ್ನು ಹೊಂದಿ ಸಮೃದ್ಧವಾಗಿದೆ. ಇವುಗಳ ಕುರಿತ ಅಧ್ಯಯನವೇ ಸಾಮಾಜಿಕ ಮೌಲ್ಯವಾಗಿದೆ. ಈ ಅಂಶಗಳು ನಮ್ಮ ಜನಪದ ಗಾದೆಗಳಲ್ಲಿ ಹಾಸುಹೊಕ್ಕಾಗಿ ಅಡಗಿವೆ. ಇವುಗಳನ್ನು ಕುರಿತು ಅಧ್ಯಯನ ಮಾಡುವುದು ಮುಖ್ಯವಾಗಿದೆ.

## ೩. ಸಾಹಿತ್ಯಿಕ ಮೌಲ್ಯ : ಒಂದು ವಿವೇಚನೆ

ಮನುಷ್ಯ ಸಮಾಜಜೀವಿ ಎಂಬುದನ್ನು ಈ ಮೊದಲೇ ತಿಳಿದಿದ್ದೇವೆ. ಆದರೆ ಸಮಾಜ ಜೀವಿಯಾದ ಮಾನವ ತನ್ನ ನಿತ್ಯ ಬದುಕಿನ ಅನುಭವನಗಳನ್ನು ಹೊರಗೆಡವಲು ಬಳಸುವ ಮಾಧ್ಯಮ ಭಾಷೆ, ಭಾಷೆಯ ಉಪಯೋಗ ಮನುಷ್ಯನನ್ನು ಇತರ ಪ್ರಾಣಿಗಳಿಂದ ಬೇರೆ ಎಂದು ಗುರುತಿಸಲು ಸಹಾಯಕವಾಗಿದೆ. ಡಾ. ಎಂ. ಚಿದಾನಂದಮೂರ್ತಿಯವರು ತಮ್ಮ 'ಭಾಷಾವಿಜ್ಞಾನದ ಮೂಲ ತತ್ವಗಳು' ಎಂಬ ಗ್ರಂಥದಲ್ಲಿ ಈ ರೀತಿ ಹೇಳಿದ್ದಾರೆ. "ಶುಕ್ರಗ್ರಹ ನಿವಾಸಿಯೊಬ್ಬ ಭೂಮಿಗೆ ಇಳಿದು ಬಂದು ಇಲ್ಲಿಯ ವಿದ್ಯಮಾನಗಳನ್ನು ತನ್ನವರಿಗೆ ವರದಿ ಮಾಡುತ್ತಾನೆಂದು ಭಾವಿಸೋಣ. ಅವನ ವರದಿಯಲ್ಲಿ ಒಂದು ಕಡೆ ಬಹುಶಃ ಹೀಗೆ ಬರೆದಿರುತ್ತದೆ – ಭೂಮಿಯ ಮೇಲೆ ಓಡಾಡುವ ಪ್ರಾಣಿಗಳನ್ನು ಸ್ಥೂಲವಾಗಿ ಎರಡು ಭಾಗಗಳಾಗಿ ವಿಂಗಡಿಸಬಹುದು. ಕೆಲವು ಪ್ರಾಣಿಗಳು ನಾಲ್ಕು ಕಾಲುಗಳ ಮೇಲೆ ಓಡಾಡಿದರೆ, ಕೆಲವು ಪ್ರಾಣಿಗಳು ನಡೆಯಲು ಹಿಂದಿನ ಎರಡು ಕಾಲುಗಳನ್ನು ಮಾತ್ರ ಬಳಸಿಕೊಂಡು ಮುಂದಿನ ಎರಡು ಕಾಲುಗಳನ್ನು ಬೇರೆ ಕೆಲಸಗಳಿಗಾಗಿ ಬಳಸಿಕೊಳ್ಳುತ್ತವೆ. ಈ ಎರಡನೆಯ ವರ್ಗದ ಪ್ರಾಣಿಗಳು ಭೂಮಿಯ ಮೇಲೆ ನಿಂತುಕೊಳ್ಳುವುದಲ್ಲದೆ ಮಾತನಾಡುವುದನ್ನೂ ಕಲಿತಿವೆ. ಈ ಮಾತನಾಡುವ ಶಕ್ತಿ ಇರುವುದರಿಂದಲೇ ಈ ಎರಡನೆಯ ವರ್ಗದ ಪ್ರಾಣಿಗಳು ಉಳಿದವರಿಗಿಂತ ಮುಂದುವರಿದಿವೆ ಇತ್ಯಾದಿ. ಈ ಬುದ್ಧಿವಂತ ಪ್ರಾಣಿಗಳೇ ಮನುಷ್ಯರು, ಮನುಷ್ಯ ಮುಖ್ಯವಾಗಿ ಮಾತನಾಡುವ ಪ್ರಾಣಿ ಉಳಿದ ಪ್ರಾಣಿಗಳಿಂದ ಮನುಷ್ಯನನ್ನು ಪ್ರತ್ಯೇಕಿಸುವ ಅಂಶಗಳಲ್ಲಿ ಭಾಷೆಯೂ ಪ್ರಧಾನವಾದುದು"[೧].

ಆದರೆ ಭಾಷೆಯ ಉಪಯೋಗವನ್ನು ಮನುಷ್ಯ ಮೊದಲಿನಿಂದಲೂ ತಿಳಿದಿರಲಿಲ್ಲ. ಭಾಷೆಯ ಉಪಯೋಗ ತಿಳಿದದ್ದು ಇತ್ತೀಚೆಗೆ. ಆ ಮೊದಲು ಮಾನವ ತನ್ನ ಮನಸ್ಸಿನ ಭಾವನೆ, ಉದ್ವೇಗಗಳನ್ನು, ಹರ್ಷ, ಆನಂದಗಳನ್ನು, ದುಃಖ ದುಮ್ಮಾನಗಳನ್ನು, ತಿಳಿಸಲು ಕುಣಿತ, ನೃತ್ಯ ಮತ್ತು ಆಂಗಿಕ ಸಂಜ್ಞೆಗಳನ್ನು ಬಳಸುತ್ತಿದ್ದನು. ಆದರೆ ಈ ರೀತಿಯು ಸಂಜ್ಞೆಗಳು ಒಂದು ಮಿತಿಗೆ ಒಳಪಟ್ಟಿದ್ದು ಕೆಲವು ನಿದಿಷ್ಟ ಅಂಶಗಳನ್ನು ಮಾತ್ರ ತಿಳಿಸಲು ಸಾಧ್ಯ. ಎಷ್ಟೋ ವಿಷಯಗಳನ್ನು ಈ ಮಾರ್ಗದ ಮೂಲಕ ತಿಳಿಸಲು ಸಾಧ್ಯವಾಗುವುದಿಲ್ಲ. ಆದುದರಿಂದ ಮನುಷ್ಯನಿಗೆ ತನ್ನ ಮನಸ್ಸಿನ ಭಾವನೆಗಳನ್ನು ಮುಕ್ತವಾಗಿ ಇತರರೊಡನೆ ಹಂಚಿಕೊಳ್ಳುವುದು ಕಷ್ಟವಾಗಿದ್ದಿತು. ಇಂಥ ಸಂದರ್ಭದಲ್ಲಿ ಮಾನವ ಭಾಷೆಯ ಉಪಯೋಗವನ್ನು ಕಂಡುಕೊಂಡ ಇದು ಆತನ ಸಂವಹನಕ್ಕೆ ಅತ್ಯಮೂಲ್ಯ ಆಸ್ತಿಯಾಗಿ ಪರಿಣಮಿಸಿದೆ.

---

೧. ಡಾ. ಎಂ.ಚಿದಾನಂದಮೂರ್ತಿ, ಭಾಷಾವಿಜ್ಞಾನದ ಮೂಲತತ್ವಗಳು, ಪು. ಸಂ. ೧೭.

ಭಾಷೆಯ ಮೂಲಕ ತನ್ನ ಮನಸ್ಸಿನ ಎಲ್ಲ ಸುಪ್ತ ಭಾವನೆಗಳನ್ನು ಬೇರೆಯವರೊಂದಿಗೆ ಹಂಚಿಕೊಳ್ಳಬಹುದು. ಈ ಭಾಷೆಯ ಉಪಯೋಗ ತಿಳಿದದ್ದು ಮತ್ತು ಭಾಷೆಯನ್ನು ಕಲಿತದ್ದು ಮಾನವ ಜೀವನ ವಿಕಾಸ ಕ್ರಮದಲ್ಲಿ ಮಹತ್ವದ ಮತ್ತು ಅದ್ಭುತವಾದ ಘಟನೆ. ಭಾಷಾವಿಜ್ಞಾನಿಯೊಬ್ಬರು ಹೇಳುವ ಹಾಗೆ "ಒಬ್ಬ ವ್ಯಕ್ತಿ ತನ್ನ ಜೀವನದಲ್ಲಿ ಮಾಡುವ ಮಹತ್ಕಾರ್ಯಗಳಲ್ಲಿ ಬಾಲ್ಯದಲ್ಲಿ ಭಾಷೆಯನ್ನು ಕಲಿಯುವುದೂ ಒಂದು". ಭಾಷೆಯ ಉಪಯೋಗ ತಿಳಿದ ಮಾನವ ಬರವಣಿಗೆ ಮಾಡಲು ಆರಂಭ ಮಾಡಿದ್ದೂ ಅದರ ಎರಡನೆ ಘಟ್ಟದಲ್ಲಿ ತುಂಬಾ ಈಚೆಗೆ. ಅದಕ್ಕೂ ಮೊದಲು ಕೇವಲ ನೆನಪಿನ ಶಕ್ತಿಯೇ ಆಧಾರವಾಗಿದ್ದಿತು. ಯಾವುದಾದರೂ ಒಂದು ವಿಷಯವನ್ನು ಒಂದು ಕಾಲದಿಂದ ಮತ್ತೊಂದು ಕಾಲಕ್ಕೆ ಒಂದು ತಲೆಮಾರಿನಿಂದ ಮತ್ತೊಂದು ತಲೆಮಾರಿಗೆ ಉಳಿಸಿ, ಬೆಳೆಸಿಕೊಂಡು ಬರಬೇಕಾದರೆ ನೆನಪಿನ ಶಕ್ತಿಯೇ ಸಹಾಯಕ ಸಾಮಗ್ರಿಯಾಗಿದ್ದಿತು. ನಮ್ಮ ವೇದ, ಪುರಾಣ ಮುಂತಾದವು ಕೂಡ ನೆನಪಿನಿಂದ ಉಳಿಸಿಕೊಂಡು ಬಂದವುಗಳೇ. ಈ ರೀತಿ ನೆನಪಿನಲ್ಲಿ ಉಳಿಸಿಕೊಂಡು ಬರಬೇಕಾದರೆ ಆ ಭಾಷೆಯಲ್ಲಿ ಲಯ, ಪ್ರಾಸ, ಅಲಂಕಾರಗಳು ಮುಖ್ಯ. ಮೌಖಿಕ ಪರಂಪರೆಯದ್ದೆ ಆದ ಯಾವುದೊ ಒಂದು ವಿಚಾರ ಒಂದು ನಿರ್ದಿಷ್ಟ ಲಯ, ಪ್ರಾಸ, ಅಲಂಕಾರಗಳಿಂದ ಕೂಡಿದ್ದರೆ, ಯಾವುದಾದರು ಒಂದು ಅಂಶ ಮರೆತು ಹೋದರೆ ಲಯ, ಪ್ರಾಸ, ಅಲಂಕಾರದ ಸಹಾಯದಿಂದ ಅದನ್ನು ನೆನಪಿಗೆ ತಂದುಕೊಂಡು ಬಳಸಲು ಸಹಾಯವಾಗುತ್ತಿತ್ತು. ಉದಾಹರಣೆಗೆ ನಮ್ಮ ಜನಪದ ಹಾಡು, ಗಾದೆ, ಒಗಟು, ಲಾವಣಿ, ಕಥೆಗಳನ್ನು ನೋಡಬಹುದು. ಇವು ಅಂದಿನಿಂದ ಕೇವಲ ವಾಕ್ ಸಂಪ್ರದಾಯದಲ್ಲೇ ಉಳಿದುಕೊಂಡು ಬಂದಿರುವುದಕ್ಕೆ ಇದೇ ಕಾರಣ.

ಅನಂತರದ ಅವಧಿಯಲ್ಲಿ ಬರವಣಿಗೆ ಬಳಕೆಗೆ ಬಂದು ಈ ಎಲ್ಲವನ್ನು ಬರೆದಿಡುವ ಅಭ್ಯಾಸ ರೂಢಿಗೆ ಬಂತು, ಬರವಣಿಗೆ ಬಳಕೆಗೆ ಬಂದ ಮೇಲೆ ಶಿಷ್ಟ ಸಾಹಿತ್ಯ ರಚನೆ ಆರಂಭವಾಯಿತು. ಸಾಹಿತ್ಯ ಎಂದರೆ ಸ + ಹಿತ, ಎಂದರೆ ಯಾವುದು ಹಿತವನ್ನು ಅಂದರೆ ಉತ್ತಮ ಅಂಶಗಳನ್ನು ಒಳಗೊಂಡಿರುವುದೋ ಅದೇ ಸಾಹಿತ್ಯ. ಸಾಹಿತ್ಯದ ಮುಖ್ಯ ಉದ್ದೇಶ ಸಹೃದಯರ ಹಿತವನ್ನು ಬಯಸುವುದು, ಬೆಳೆಸುವುದು. ಈ ಸಾಹಿತ್ಯ ಎಂಬ ಪದ ಮೊದಲು ಕಂಡುಬರುವುದು ಭಾರತೀಯ ಕಾವ್ಯ ಮೀಮಾಂಸಕನಾದ ರಾಜಶೇಖರನ ಕೃತಿಯಲ್ಲಿ. ರಾಜಶೇಖರನ 'ಕಾವ್ಯಮೀಮಾಂಸೆ' ಎಂಬ ಗ್ರಂಥದಲ್ಲಿ 'ಸಾಹಿತ್ಯವಿದ್ಯಾ' ಎಂಬ ಪದ ಪ್ರಯೋಗವಾಗಿದೆ. ಬಹುಶಃ ಇದೇ ಮೊದಲ ಉಲ್ಲೇಖ. ಅನಂತರ ವಿಶ್ವನಾಥ ತನ್ನ ಮೀಮಾಂಸಾ ಕೃತಿಗೆ 'ಸಾಹಿತ್ಯ ದರ್ಪಣ' ಎಂಬ ಹೆಸರನ್ನೇ ಇಟ್ಟಿದ್ದಾನೆ. ಇಲ್ಲಿಂದ ಮುಂದೆ ಸಾಹಿತ್ಯ ಎಂಬುದು ಬೆಳೆದು ಬಂದಿದೆ.

ಸಾಹಿತ್ಯಮೌಲ್ಯ ಎಂಬುದು Literary Value ಎಂಬ ಇಂಗ್ಲಿಷ್ ಪದಕ್ಕೆ ಸಂವಾದಿಯಾಗಿ ರೂಪುಪಡೆದಿದೆ. ಒಂದು ಸಾಹಿತ್ಯ ಕೃತಿ ಹೊಂದಿರುವ ಹಲವಾರು ಮೌಲ್ಯಗಳನ್ನೇ ಸಾಹಿತ್ಯ ಮೌಲ್ಯ ಎಂದು ಕರೆಯಬಹುದಾಗಿದೆ. ಸಾಹಿತ್ಯದಲ್ಲಿ ಅಡಗಿರಬಹುದಾದ ಸಾಹಿತ್ಯ ಅಂಶಗಳನ್ನೇ ಸಾಹಿತ್ಯ ಮೌಲ್ಯಗಳು ಎಂದು ಕರೆಯಲಾಗಿದೆ. ಸಾಹಿತ್ಯ ಮೌಲ್ಯಗಳು ಮುಖ್ಯವಾಗಿ ಅದರ ನಿರೂಪಣಾ ವಿಧಾನ, ಅದರಲ್ಲಿ ಬಳಕೆ ಆಗಿರುವ ವಿಶಿಷ್ಟ ಪದ ಪ್ರಯೋಗಗಳು, ವಾಕ್ಯ ರಚನೆ ವಾಕ್ಯ ರಚನೆಯಲ್ಲಿ ಅನುಸರಿಸಿರುವ ಮಾರ್ಗಗಳು. ಅದರಲ್ಲಿ ಅಡಗಿರುವ ಹಾಸ್ಯ, ವ್ಯಂಗ್ಯ, ವಿಡಂಬನೆ, ಅಲಂಕಾರಗಳು ಇವೇ ಮುಂತಾದವುಗಳು ಈ ಎಲ್ಲಾ ಅಂಶಗಳೇ ಸಾಹಿತ್ಯ ಮೌಲ್ಯಗಳಾಗಿವೆ. ಸಾಹಿತ್ಯ ಮೌಲ್ಯಗಳ ಕುರಿತ ಅಧ್ಯಯನ ತುಂಬಾ ವಿಶಿಷ್ಟವಾದುದು. ಏಕೆಂದರೆ ಯಾವುದಾದರೂ ಒಂದು ಪದದ ಮೂಲಕ ಅದರ ಸಂಪೂರ್ಣ ಸಾಹಿತ್ಯಿಕ ಅಂಶವನ್ನು ತಿಳಿಯಬಹುದು. ಈ ಕಾರಣದಿಂದ ಸಾಹಿತ್ಯಿಕ ಅಧ್ಯಯನ ಇಂದು ತನ್ನದೇ ಆದ ಪ್ರಾಮುಖ್ಯತೆಯನ್ನು ಪಡೆದಿದೆ. ಈ ನಿಟ್ಟಿನಲ್ಲಿ ಅಧ್ಯಯನ ನಡೆಯುತ್ತಲೇ ಇದೆ.

ಸಾಹಿತ್ಯಕ ಮೌಲ್ಯಗಳಲ್ಲಿ ಪ್ರಮುಖವಾದುದು ನಿರೂಪಣಾ ವಿಧಾನ. ನಿರೂಪಣಾ ವಿಧಾನ ಒಂದು ಸಾಹಿತ್ಯ ಕೃತಿಯ ಅತಿ ಮುಖ್ಯ ಅಂಶ. ಒಂದು ನಿಯಮಿತವಾದ ಕ್ರಮದಲ್ಲೇ ನಿರೂಪಣೆ ಮಾಡುವುದರಿಂದ ಆ ಸಾಹಿತ್ಯ ಓದುಗರಿಗೆ ಸರಿಯಾದ ರೀತಿಯಲ್ಲಿ ಅರ್ಥವಾಗುತ್ತದೆ ಮತ್ತು ಆ ಸಾಹಿತ್ಯದ ಉದ್ದೇಶ ಆತನಿಗೆ ತಿಳಿಯುತ್ತದೆ. ಸಾಹಿತ್ಯದ ಉದ್ದೇಶವೂ ಈಡೇರುತ್ತದೆ. ನಿರೂಪಣಾ ವಿಧಾನವನ್ನು ಅನುಕ್ರಮವಾಗಿ ಅನುಸರಿಸದೆ ಯಾವ್ಯಾವುದೋ ವಿಷಯವನ್ನು ಎಲ್ಲೆಲ್ಲಿಯೋ ನಿರೂಪಿಸಿ, ಅದಲು ಬದಲು ಮಾಡಿದರೆ ಸಾಹಿತ್ಯದ ಉದ್ದೇಶಿತ ಅರ್ಥ ಬೇರೆಯಾಗಬಹುದು. ಅಥವಾ ಅರ್ಥವೇ ಆಗದೆ ಇರಬಹುದು. ಇದರಿಂದ ಸಾಹಿತ್ಯದ ಉದ್ದೇಶ ನೆಲಕಚ್ಚುವುದಲ್ಲದೆ, ಓದುಗನಿಗೂ ಕಸಿವಿಸಿಯನ್ನು ಉಂಟು ಮಾಡಿ ಮೈಪರಚಿಕೊಳ್ಳುವಂತೆ ಆಗುತ್ತದೆ. ಈ ಎಲ್ಲಾ ಕಾರಣಗಳಿಂದ ಸಾಹಿತ್ಯದ ನಿರೂಪಣಾ ವಿಧಾನ ಅನುಕ್ರಮವಾಗಿ ಆಧಿಯಿಂದ ಅಂತ್ಯದವರೆಗೆ ಅನುಸರಣಿಯಾಗಿ ಅಡಗಿರಬೇಕು.

ಸಾಹಿತ್ಯದಲ್ಲಿ ವಾಕ್ಯರಚನೆಯು ಕೂಡ ಪ್ರಮುಖವಾದುದು. ಒಂದು ವಾಕ್ಯ ನಿಯಮಿತ ನಿರ್ದಿಷ್ಟ ಅರ್ಥ ಸೂಚಿಸಲು ಅದರ ರಚನೆ ಸರಿಯಾಗಿರಬೇಕು. ಕತೃ, ಕ್ರಿಯೆ, ಕರ್ಮ, ವಿಶೇಷಣಾ, ವಚನ, ವಿಭಕ್ತಿ, ಇವೇ ಮುಂತಾದವುಗಳು ಒಂದು ಹದದಲ್ಲಿ ಬೆರೆತು ಬರಬೇಕು. ಸಾಂಬಾರಿಗೆ ಯಾವ ಯಾವ ವ್ಯಂಜಕ ಸಾಮಗ್ರಿ ಯಾವ ಪ್ರಮಾಣದಲ್ಲಿ ಬೆರೆತರೆ ಅದರ ರುಚಿ ಉತ್ತಮವಾಗಿರುತ್ತದೋ, ಸ್ವಲ್ಪ ಏರು ಪೇರಾದರೂ ರುಚಿಯಲ್ಲಿ ವ್ಯತ್ಯಾಸವಾಗುತ್ತದೋ ಹಾಗೆಯೇ ವಾಕ್ಯ ರಚನೆಯಲ್ಲಿ ಮೇಲಿನ ಅಂಶಗಳು ಹದವರಿತು ಬೆರತಿರಬೇಕು.

ಸಾಹಿತ್ಯ ಮೌಲ್ಯಗಳನ್ನು ಗುರುತಿಸುವಾಗ ಆ ಸಾಹಿತ್ಯದಲ್ಲಿ ಬಳಕೆಯಾಗಿರುವ ವಿಶಿಷ್ಟ ಪದಪ್ರಯೋಗಳು ಮುಖ್ಯವಾಗುತ್ತವೆ. ಈ ರೀತಿಯ ಪದಗಳು ಆ ಪ್ರದೇಶದ ವಿಶಿಷ್ಟ ಸಂಸ್ಕೃತಿಯನ್ನು ಅಲ್ಲಿರುವ, ಅಲ್ಲಿಗೇ ವಿಶೇಷವಾದ ಸಂಪ್ರದಾಯ ಆಚರಣೆಗಳನ್ನು ತಿಳಿಸುತ್ತವೆ. ಈ ರೀತಿಯ ಪದಗಳು ಕನ್ನಡ ಶಬ್ದಕೋಶವನ್ನು ಸೇರಿ ಕನ್ನಡದ ಬೆಳವಣಿಗೆಗೆ ಪೂರಕವಾಗುತ್ತವೆ. ಈ ರೀತಿಯ ಪದಗಳು ಆ ಸಾಹಿತ್ಯದ ಪ್ರಾದೇಶಿಕ ಮಹತ್ವವನ್ನು ಒದಗಿಸಲು ಸಹಕಾರಿಯಾಗುತ್ತವೆ. ಉದಾಹರಣೆಗೆ ಕುವೆಂಪು ಅವರ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಇಂಥ ಹಲವಾರು ಪದಗಳನ್ನು ಕಾಣಬಹುದು.

ವಾಕ್ಯ ರಚನೆಯಲ್ಲಿ ಅನುಸರಿಸುವಂಥ ಅಂಶಗಳು ಅಥವಾ ಮಾರ್ಗಗಳು ಕೂಡ ಸಾಹಿತ್ಯಿಕ ಮೌಲ್ಯಗಳಾಗಿವೆ. ವಾಕ್ಯ ರಚನೆ ಮಾಡುವಾಗ ಸಂಕ್ಷಿಪ್ತವಾಗಿ ರಚನೆ ಮಾಡುವುದು ಒಂದು ವಿಧಾನ. ಆದರೆ ವಾಕ್ಯ ಸಂಕ್ಷಿಪ್ತವಾಗಿದ್ದರೂ ಪಂಪ ಹೇಳುವಂತೆ ಹಿತ ಮಿತವಾಗಿದ್ದರೂ ಕಿರಿದರಲ್ಲಿ ಹಿರಿದಾದ ಅರ್ಥವನ್ನು ಕನ್ನಡಿಯಲ್ಲಿ ಕರಿಯನ್ನು ಹಿಡಿಯುವ ಪ್ರಯತ್ನವನ್ನು ಮಾಡಲಾಗಿರುತ್ತದೆ. 'ಹತ್ತು ಕಟ್ಟುವ ಕಡೆ ಒಂದು ಮುತ್ತುಕಟ್ಟು' ಎನ್ನುವಂತೆ ಹಲವಾರು ಪದ, ವಾಕ್ಯಗಳಲ್ಲಿ ಹೇಳಬೇಕಾದುದನ್ನು ಕೇವಲ ಒಂದೇ ಪದ, ವಾಕ್ಯದಲ್ಲಿ ಹೇಳಲಾಗಿರುತ್ತದೆ. ಇದರಿಂದ ಸಾಹಿತ್ಯದ ಮೌಲ್ಯ ಅಧಿಕವಾಗುತ್ತದೆ. ಹಾಗೆಯೇ ಒಂದು ವಾಕ್ಯ ರಚನೆ ಮಾಡಿದಾಗ ಅದು ಸೂಚಿಸುವ ಅರ್ಥ ಪ್ರತೀತಿ ಬೇರೆ ಬೇರೆಯಾಗಿರುತ್ತದೆ. ಅದು ಮೇಲ್ನೋಟಕ್ಕೆ ಒಂದು ಸಾಮಾನ್ಯ ಅರ್ಥವನ್ನು ನೀಡುತ್ತಿದ್ದರೆ. ಅದರ ಅಂತರಂಗದಲ್ಲಿ ಬೇರೊಂದು ವಿಶಿಷ್ಟ ಅರ್ಥ ಅಡಗಿರುತ್ತದೆ. ಒಂದೊಂದು ಪದವನ್ನು ಹಿಂಜಿ ನೋಡಿದಂತೆ ಅದರ ಅರ್ಥ ಪ್ರತೀತಿ ಬೇರೆ ಬೇರೆಯಾಗಿರುತ್ತದೆ. ಈ ರೀತಿಯ ವಾಕ್ಯ ರಚನಾ ಮಾರ್ಗಗಳು ಸಾಹಿತ್ಯಿಕ ಮೌಲ್ಯಗಳಾಗಿ ಪರಿಣಮಿಸಿವೆ.

ಸಾಹಿತ್ಯದಲ್ಲಿ ಹಾಸ್ಯ, ವ್ಯಂಗ್ಯ ವಿಡಂಬನೆಗಳು ಅಡಗಿರುತ್ತವೆ. ಇವು ಕೂಡ ಸಾಹಿತ್ಯಿಕ ಮೌಲ್ಯಗಳಾಗಿವೆ. ಸಾಹಿತ್ಯದ ಮುಖ್ಯ ಉದ್ದೇಶ ರಸಾನುಭವ, ಸಹೃದಯ ಒಂದು ಸಾಹಿತ್ಯ ಕೃತಿಯನ್ನು ಓದಿದರೆ ಅದರಿಂದ ಆತನಿಗೆ ಸಂತೋಷ ಉಂಟಾಗುವಂತಿರಬೇಕು. ಆದುದರಿಂದ ಸಾಹಿತ್ಯ ಕೃತಿಗಳು ಹಾಸ್ಯವನ್ನು ಒಳಗೊಂಡಿರುತ್ತದೆ. ನಾಟಕದಲ್ಲಿಯಾದರೆ ವಿದೂಷಕನ ಪಾತ್ರದ ಮೂಲಕ ಹಾಸ್ಯರಸವನ್ನು ಚಿಮ್ಮಿಸಲಾಗುತ್ತದೆ. ಸಾಹಿತ್ಯ ಕೃತಿಗಳಲ್ಲಿ ಕೆಲವಾರು ಘಟನೆಗಳನ್ನು ಹಾಸ್ಯದ ಸನ್ನಿವೇಶಗಳ ಮೂಲಕ ತಿಳಿಸಲಾಗುತ್ತದೆ. ಹಾಸ್ಯವನ್ನು ತಿಳಿಸಲು ಕೆಲವೊಂದು ವಿಶಿಷ್ಟಪದ ಪ್ರಯೋಗ ಮಾಡಲಾಗುತ್ತದೆ. ಈ ಮೂಲಕ ಸಾಹಿತ್ಯ ಕೃತಿಯಲ್ಲಿ ಹಾಸ್ಯವನ್ನು ತಿಳಿಸುತ್ತಾರೆ. ಹಾಗೆಯೇ ಕೆಲವೊಂದು ವ್ಯಂಗ್ಯವನ್ನು ತರಲಾಗುತ್ತದೆ. ಯವುದಾದರು ವಿಷಯ ಪ್ರಸ್ತಾಪದಲ್ಲಿ ಸಮಾಜದಲ್ಲಿ ಅಡಗಿರುವ ಹಲವಾರು ನಂಬಿಕೆ, ಸಂಪ್ರದಾಯ, ಆಚರಣೆಗಳನ್ನು ವ್ಯಂಗದ ಮೂಲಕ ಆರೋಪಿಸಿ ಅವುಗಳನ್ನು ಜರಿಯುವುದು ಇದರ

ಉದ್ದೇಶ. ವಿಡಂಬನೆಯು ಅದೇ ರೀತಿ. ಕಂದಾಚಾರಗಳ ಹೊರೆಯನ್ನು ಕುರಿತು, ಬೇರಾವುದೋ ವಿಷಯದ ಕುರಿತು ವಿಡಂಬನೆಯ ಪ್ರಯೋಗಿಸಲಾಗುತ್ತದೆ. ಈ ಎಲ್ಲವೂ ಸಾಹಿತ್ಯಿಕ ಮೌಲ್ಯವಾಗಿ ಪರಿಣಮಿಸಿವೆ.

ಸಾಹಿತ್ಯ ರಚನೆಯಲ್ಲಿ ಅಲಂಕಾರವನ್ನು ಬಳಸುವುದು ಸಾಮಾನ್ಯವಾಗಿದೆ. ಇದರಿಂದ ಅದರ ಮೌಲ್ಯ ಅಧಿಕವಾಗುತ್ತದೆ. 'ಅಲಂಕಾರ ಎಂದರೆ ಸಾಲುವಂತೆ ಮಾಡುವುದು. ಸಾಕಾಗದ ಸ್ಥಿತಿಯನ್ನು ಹೋಗಲಾಡಿಸುವುದು ನ್ಯೂನಾಂಶವನ್ನು ಭರ್ತಿಮಾಡುವುದು ಎಂದರ್ಥ. ಇದರ ವ್ಯುತ್ಪತ್ತಿಯನ್ನು ಸಾಮಾನ್ಯವಾಗಿ ಅಲಂಕ್ರಿಯತೇ ಅನೇನ ಇತಿ ಅಲಂಕಾರಃ' ಎಂದು ಹೇಳಲಾಗುತ್ತದೆ. 'ಯಾವುದನ್ನು ಅಲಂಕರಿಸುವುದೋ ಅದು ಅಲಂಕಾರ' ಎಂದು ಇದರ ಸ್ಥೂಲಾರ್ಥ.

ಮೊದಲು 'ಅಲಂಕಾರ' ಪದಕ್ಕೆ ಸೌಂದರ್ಯವೆಂಬ ವಿಶಾಲವಾದ ಅರ್ಥ ಇದ್ದುದು ಸರಿಯಷ್ಟೆ. ಆದರೆ ಈ ಧೋರಣೆ ಮರೆಯಾಗಿ 'ಶಬ್ದಾರ್ಥಗಳ ವೈಚಿತ್ರ್ಯ' ಎಂಬ ಅರ್ಥ ರೂಢಿಗೆ ಬಂದಿತು. ಇದರಿಂದ 'ಮಾತಿನ ವಿಕಲ್ಪಗಳು ಅನಂತ, ಇವುಗಳ ಬಗೆಗಳೇ ಅಲಂಕಾರಗಳ ಎಂಬ ಶ್ರದ್ದೆ ಬೆಳೆಯಿತು'[೧] ಈ ರೀತಿಯ ಅರ್ಥ ಪಡೆದು ಸಾಹಿತ್ಯದಲ್ಲಿ ಹಲವಾರು ಅಲಂಕಾರಗಳು ಬಳಕೆ ಆಗಿವೆ. ಅಂದರೆ ಉಪಮೆ, ರೂಪಕ, ಅತ್ಯುಕ್ತಿ, ಅನನ್ವಯ, ಅತಿಶಯೋಕ್ತಿ ಮುಂತಾದವು. ಇದರಿಂದ ಸಾಹಿತ್ಯದ ಮೌಲ್ಯ ಅಧಿಕವಾಗಿದೆ.

ಸಾಹಿತ್ಯಕ ಮೌಲ್ಯಗಳ ಕುರಿತ ಅಧ್ಯಯನ ತನ್ನದೇ ಆದ ಪ್ರಾಮುಖ್ಯತೆಯನ್ನು ಪಡೆದಿದೆ. ಈ ರೀತಿಯ ಅಧ್ಯಯನದಿಂದ ಹಲವಾರು ಅಂಶಗಳು ಬೆಳಕಿಗೆ ಬರಲು ಸಹಾಯವಾಗುತ್ತದೆ. ಅದರಲ್ಲೂ ಗಾದೆಗಳ ಸಾಹಿತ್ಯಿಕ ಮೌಲ್ಯದ ಅಧ್ಯಯನ ತುಂಬಾ ಪ್ರಮುಖವಾದುದು. ಗಾದೆಗಳು ಅನಕ್ಷರಸ್ಥರು ಅನುಭವದಿಂದ ಕಟ್ಟಿದ ಉಕ್ತಿಗಳು. ಇವುಗಳಲ್ಲಿ ಹಲವಾರು ಸಾಹಿತ್ಯಿಕ ಮೌಲ್ಯಗಳು ಅಡಗಿದ್ದು ಅವುಗಳ ಕುರಿತ ಅಧ್ಯಯನ ಅಗತ್ಯವಾಗಿದೆ.

---

೧. ಮಲ್ಲೇಪುರಂ ಜಿ. ವೆಂಕಟೇಶ್, ಭಾರತೀಯ ಕಾವ್ಯಶಾಸ್ತ್ರ ಪರಿಭಾಷೆ, ಪು. ಸಂ. ೪೯–೫೦

## ೪ ಜಾನಪದ ಗಾದೆಗಳಲ್ಲಿ ಸಾಮಾಜಿಕ ಮೌಲ್ಯ

ಗಾರೆಗಳು ಆದ್ಯಂತವಾಗಿ ಸಮಾಜ ಜೀವಿಗಳಾದ ಮಾನವರವು. ಅವು ಹುಟ್ಟಿ ಬೆಳೆಯುವುದು ಸಾಮಾಜಿಕರಿಂದಲೆ; ಸಾಮಾಜಿಕರಿಗಾಗಿಯೆ. ಗಾದೆಗಳು ಸ್ವರ್ಗ–ನರಕ, ಕಿನ್ನರ–ಕಿಂಪುರುಷ, ಪಕ್ಷಿ ಪ್ರಾಣಿಗಳನ್ನು ಕುರಿತಾಡುತ್ತವಾದರೂ ಅವುಗಳ ಮುಖ್ಯೋದ್ದೇಶ ಜೀವಂತ ಮಾನವ ಪ್ರಪಂಚ ಕುರಿತದ್ದು ಮನುಷ್ಯ ಮತ್ತಷ್ಟು ಉತ್ತಮ ಮನುಷ್ಯನಾಗಿ ಬಾಳುವಂತೆ ಮಾರ್ಗದರ್ಶನ ಮಾಡುವುದೇ ಅವುಗಳ ಮುಖ್ಯ ಗುರಿ. ಅದಕ್ಕೆ ಬೇಕಾದ ವಿವೇಕ, ತಾಳ್ಮೆ, ಶ್ರಮ, ಶಿಸ್ತು, ತಪಸ್ಸುಗಳ ತರಬೇತಿ ನೀಡುವುದು ಗಾದೆಗಳ ಪರಮ ಹೊಣೆಗಾರಿಕೆ. ಮಾನವ ತನ್ನ ಬಾಳಿನ ಭವಿಷ್ಯವನ್ನು ತೆರೆದ ಕಣ್ಣಿನಿಂದ, ಬಿಚ್ಚು ಮನಸ್ಸಿನಿಂದ ನೋಡಲು ಸೂತ್ರವಾದಂಥ ನುಡಿ ದುರ್ಬೀನುಗಳನ್ನು ಒದಗಿಸಿಕೊಡುವುದು ಗಾದೆಗಳ ಧ್ಯೇಯ, ಹೀಗೆ ಮಾಡುವುದರಿಂದ ಆತ ತನ್ನನ್ನು ತಾನು ಅರಿತುಕೊಂಡು ಉತ್ತಮನಾಗಿ ಆದರ್ಶ ಪ್ರಾಯನಾಗಿ ಬಾಳುವಂತಾಗಲಿ ಎಂಬುದೇ ಅವುಗಳ ನಿತ್ಯ ಹಾರೈಕೆ.

ಗಾದೆಗಳನ್ನು ಈ ದೃಷ್ಟಿಯಿಂದ ನೋಡಿದಾಗ ಪ್ರತಿಯೊಂದು ಶುದ್ಧ ಗಾದೆಯೂ ಮಹತ್ವಪೂರ್ಣವಾದ ಸಾಮಾಜಿಕ ಮೌಲ್ಯವನ್ನೊಳಗೊಂಡಿರುವುದು ಮನವರಿಕೆಯಾಗುತ್ತದೆ. ಜೊತೆಗೆ ಅನೇಕ ಗಾದೆಗಳು ಸಾಹಿತ್ಯಿಕ ಹಾಗೂ ಸಾಂಸ್ಕೃತಿಕ ಮೌಲ್ಯಗಳನ್ನು ಒಳಗೊಂಡಿದ್ದು ಒಂದು ಸಾಹಿತ್ಯ ಭಂಡಾರದ ಅಮೂಲ್ಯ ನಾಣ್ಯಗಳಾಗಿರುವುದು ವೇದ್ಯವಾಗುತ್ತದೆ. ಈಗ ಮೂಲಸತ್ವ ಹಾಗೂ ಮಹತ್ವವನ್ನುಳ್ಳ ಕೆಲವು ಗಾದೆಗಳ ಹಿನ್ನಲೆಯನ್ನು ಅರಿತು, ಅವುಗಳ ಸಾಮಾಜಿಕ ಮೌಲ್ಯವೇನೆಂದು ಪರಿಶೀಲಿಸೋಣ.

ಅಕ್ಕ ಇರುವ ತನಕ ಭಾವತನ

ಈ ಗಾದೆ ಮುಖ್ಯವಾಗಿ ಅಕ್ಕ ಮತ್ತು ಅಕ್ಕನ ಗಂಡ ಭಾವನ ಸಂಬಂಧವನ್ನು ತಿಳಿಸುತ್ತದೆ. ಅಕ್ಕನಿಗೆ ತನ್ನ ತಂಗಿ, ಅಣ್ಣ, ತಮ್ಮಂದಿರ ಮೇಲೆ ಇರುವಷ್ಟು ಪ್ರೀತಿ ಭಾವನಿಗೆ ಇರುವುದಿಲ್ಲ. ಕಾರಣ ಇವರು ನೇರವಾಗಿ ಸಂಬಂಧಿಗಳಲ್ಲ. ತನ್ನ ಹೆಂಡತಿಯ ಸೋದರ, ಸೋದರಿ ಸಂಬಂಧವಷ್ಟೇ ಆತನಿಗೆ. ಆದುದರಿಂದ ಪ್ರೀತಿ ಕಡಿಮೆಯೆ. ಅಕ್ಕ ಇರುವವರಗೆ ಅವರ ಮನೆಗೆ ಹೋಗಿಬರುವುದು ಮಾಡಬಹುದು. ಇದಕ್ಕೆ ಭಾವನಿಂದ ಅಡ್ಡಿ ಆತಂಕಗಳೂ ಇರುವುದಿಲ್ಲ. ಆದರೆ ಅಕಸ್ಮಾತ್ ಅಕ್ಕ ತೀರಿಹೋದರೆ ಅಕ್ಕನ ಜೊತೆಯಲ್ಲೇ ಭಾವನ ಸಂಬಂಧಕ್ಕೆ ತೆರೆ ಬೀಳುತ್ತದೆ. ಏಕೆಂದರೆ ಇದು ಪುರುಷ ಪ್ರಧಾನ ಸಮಾಜವಾದುದರಿಂದ ಆತ ಮತ್ತೊಂದು ಮದುವೆ ಆಗುತ್ತಾನೆ. ಆ ಸಂಧರ್ಭದಲ್ಲಿ ಈ ಕಡೆಯ ಎಲ್ಲ

ಸಂಬಂಧ ಕಡಿದು ಹೋಗುತ್ತವೆ ಎಂಬುದನ್ನು ಈ ಗಾದೆ ತಿಳಿಸುತ್ತದೆ. ಈ ಗಾದೆಗೆ ಪೂರಕವಾಗಿ 'ಅಣ್ಣ ನಮ್ಮೋನಾದ್ರೆ ಅತ್ಗೆ ನಮ್ಮೋಳ' ಎಂಬ ಗಾದೆಯನ್ನು ನೋಡಬಹುದು.

ಅಗಸನ ಅಂಗೈಲಿ ಉಣ್ಣಬಹುದು

ಕೆಲಸಿಗನ ಅಂಗಳದಲ್ಲಿ ಉಣ್ಣಕಾಗಲ್ಲ.

ಅಗಸ ಎಂದರೆ ಊರಿನ ಎಲ್ಲ ಬಟ್ಟೆಯನ್ನು ಒಗೆದು ಶುಚಿಮಾಡಿಕೊಡುವವನು. ಅದೇ ರೀತಿ ಕೆಲಸಿಗ ಎಂದರೆ ಕ್ಷೌರಿಕ. ಕೂದಲು ಕತ್ತರಿಸುವ ವೃತ್ತಿ ಈತನದು. ಈತನನ್ನು ಕೆಲಸಿಗ, ಅಜಾಮ, ಹೆಸರಿಲ್ಲದವನು, ಬಾರ್ಬರ್ – ಮುಂತಾದ ಹೆಸರುಗಳಿಂದ ಕರೆಯುತ್ತಾರೆ. ರಾತ್ರಿಯ ವೇಳೆ ಈತನನ್ನು ಹೆಸರು ಹಿಡಿದು ಕರೆಯುವುದಿಲ್ಲ. ಆ ರೀತಿ ಕರೆಯುವುದು ನಿಷಿದ್ದ. ಇದು ಜನಸಮಾನ್ಯರ ನಂಬಿಕೆ. ಇದರ ಬಗ್ಗೆ 'ನಾಪಿತ ಎಂದರೆ ಪಾಪ ಬಂದೀತೆ?' ಎಂಬ ಗಾದೆಯೂ ಇದೆ. ಮೇಲಿನ ಗಾದೆಯನ್ನು ವಿಶ್ಲೇಷಿಸಿದರೆ ಅಗಸ ಮತ್ತು ಕೆಲಸಿಗನ ವೃತ್ತಿ ನಿಮಿತ್ತವಾಗಿ ಮಾಡಬಹುದಾದ ಕಾರ್ಯವನ್ನು ತಿಳಿಸುತ್ತದೆ. ಅಗಸನು ಯಾವಾಗಲೂ ಬಟ್ಟೆಯನ್ನು ಒಗೆಯಲು ನೀರಿನಲ್ಲೇ ಇರುತ್ತಾನೆ. ಹಾಗೆಯೇ ಬಟ್ಟೆಯನ್ನು ಶುಚಿ ಮಾಡುತ್ತಲೇ ಇರುವುದರಿಂದ ಅವನ ಅಂಗೈ ಕೂಡ ಶುಚಿಯಾಗಿರುತ್ತದೆ. ಶುದ್ಧವಾದ ಕೈ ಆದುದರಿಂದ ಅದರಲ್ಲಿ ಊಟ ಮಾಡಬಹುದು. ಅದರಿಂದ ಆರೋಗ್ಯಕ್ಕೆ ಯಾವುದೇ ತೊಂದರೆ ಇಲ್ಲ. ಆದರೆ ಕೆಲಸಿಗನ ವೃತ್ತಿ ಕೂದಲು ಕತ್ತರಿಸುವುದು. ಆದ ಕಾರಣ ಅವನ ಮನೆಯ ಅಂಗಳದಲ್ಲೆಲ್ಲ ಕೂದಲುಗಳು ಉದುರಿರುತ್ತವೆ. ಇದರಿಂದ ಅವನ ಅಂಗಳದಲ್ಲಿ ಕುಳಿತು ನಿರ್ಭಯವಾಗಿ ಊಟ ಮಾಡಲಾಗದು. ಏಕೆಂದರೆ ಊಟದ ಜೊತೆ ಕೂದಲನ್ನು ತಿನ್ನುವ ಭಯದಿಂದ.

ಜನಪದರು ಗಂಡನ ಮನೆಗೂ, ತಂದೆಯ ಮನೆಗೂ ಕೊಡುವ ಪ್ರಾಮುಖ್ಯವೇ ಬೇರೆ ಬೇರೆಯಾಗಿರುತ್ತದೆ. ಈ ರೀತಿಯ ಪ್ರಾಮುಖ್ಯತೆಯನ್ನು ಹಲವಾರು ಗಾದೆಗಳು ವಿಶದೀಕರಿಸುತ್ತವೆ.

ಅಪ್ಪನ ಅರಮನೆಗಿಂತ ಗಂಡನ

ಕಿರುಮನೆ ಲೇಸು.

ಸಮಾಜದಲ್ಲಿ ಪುರುಷನೇ ಪ್ರಧಾನ. ಪಿತೃ ಪ್ರಧಾನ ಕುಟುಂಬಗಳೇ ಇಂದು ಎಲ್ಲ ಕಡೆ ಚಾಲ್ತಿಯಲ್ಲಿರುವುದು. ಆದುದರಿಂದ ಮದುವೆಯಾದ ಹೆಣ್ಣು ತನ್ನ ಉಳಿದ ಜೀವನವನ್ನು ಗಂಡನ ಮನೆಯಲ್ಲೇ ಕಳೆಯಬೇಕು. ಅದಕ್ಕೆ ಪರ್ಯಾಯ ಮಾರ್ಗವಿಲ್ಲ; ಇದ್ದರೂ ಕ್ವಚಿತ್ತಾಗಿದೆ. ಗಂಡನ ಮನೆ ಅರಮನೆಯಾಗಿರಬಹುದು. ಗುಡಿಸಲಾಗಿರಬಹುದು. ಮೆಟ್ಟಿದ ಮನೆಯೇ ಸರ್ವಸ್ವ, ಗಂಡನ ಮನೆ ಕಿರಿದು,

ಗುಡಿಸಲು ಎಂಬ ಕಾರಣದಿಂದ ತಂದೆಯ ಮನೆಯನ್ನು ಆಶ್ರಯಿಸುವಂತಿಲ್ಲ. ಇದು ಸಮಾಜದಲ್ಲಿ ನಿಷಿದ್ದ. ಒಂದು ವೇಳೆ ತಂದೆಯ ಮನೆಯನ್ನು ಆಶ್ರಯಿಸಿದ್ದೇ ಆದಲ್ಲಿ ಎದುರಾಗುವ ಸಮಸ್ಯೆಗಳು ನೂರಾರು. ತಂದೆಯ ಮನೆಗೆ ಸೊಸೆಯರು ಬಂದಿರುತ್ತಾರೆ. ಅವರು ಮನೆಯ ಮಗಳು ಬಂದರೂ ಪ್ರೀತಿಸುವ, ಸತ್ಕರಿಸುವ, ಉಪಚರಿಸುವ ಕೆಲಸವನ್ನು ಮಾಡುವುದಿಲ್ಲ. ಬದಲಿಗೆ ಹೀಯಾಳಿಸಿ, ತುಚ್ಚವಾಗಿ ಮಾತನಾಡಿ ಮನಸ್ಸನ್ನು ನೋಯಿಸುತ್ತಾರೆ. ಸಮಾಜವೂ ಕೂಡ 'ಗಂಡ ಬಿಟ್ಟ ಗರತಿ' ಎಂಬುದಾಗಿ ಆಡಿಕೊಳ್ಳಲಾರಂಭಿಸುತ್ತದೆ. ಈ ಎಲ್ಲಾ ಕಾರಣಗಳಿಂದ ಅಪ್ಪನದು ಅರಮನೆಯೇ ಆದರೂ ಪರವಾಗಿಲ್ಲ. ಅದಕ್ಕಿಂತ ಮಿಗಿಲು ಗಂಡನ ಕಿರುಮನೆ ಎಂಬುದಾಗಿ ಜನಪದರು ಸ್ವತಃ ಅನುಭವದಿಂದ ಕಂಡುಕೊಂಡಿದ್ದಾರೆ. ಇದಕ್ಕೆ ಪೂರಕವಾದ ಗಾದೆಯೆಂದರೆ 'ಅಪ್ಪನ ಮನೆ ತಂಪಿಗಿಂತ, ಹಿಪ್ಪೆ ಮರದ ತಂಪು ಲೇಸು', ಗಂಜೀಯ ಕುಡಿದರೂ ಗಂಡನ ಮನೆ ಲೇಸು ಇಲ್ಲಿಯೂ ಕೂಡ ತಂದೆಯನ್ನು ಆಶ್ರಯಿಸದಿರುವುದು ಒಳಿತು ಎಂಬುದನ್ನು ತಿಳಿಸುತ್ತದೆ.

ಅಮ್ಮ ಪಟ್ಟಕ್ಕೆ ಬರುವಾಗ್ಗೆ
ಅಪ್ಪ ಚಟ್ಟಕ್ಕೆ

ಈ ಗಾದೆಯು ಸಮಾಜದಲ್ಲಿ ರೂಢಿಯಲ್ಲಿದ್ದ ಬಾಲ್ಯ ವಿವಾಹ ಪದ್ಧತಿಯನ್ನು ತಿಳಿಸುತ್ತದೆ. ಇಲ್ಲಿ ಪಟ್ಟಕ್ಕೆ ಎಂದರೆ ಋತುಮತಿಯಾಗುವುದು. ದೊಡ್ಡವಳಾಗುವುದು ಎಂಬ ಅರ್ಥ ಬರುತ್ತದೆ. ಸಾಮಾನ್ಯವಾಗಿ ಇಂದು ಹುಡುಗಿಯರು ಋತುಮತಿಯಾದ ಅನಂತರ ಮದುವೆ ಮಾಡುವುದು ವಾಡಿಕೆ. ಆದರೆ ಹಿಂದೆ ಬಾಲ್ಯ ವಿವಾಹ ಆಚರಣೆಯಲ್ಲಿತ್ತು. ಹುಡುಗಿಗೆ ತುಂಬ ಚಿಕ್ಕ ವಯಸ್ಸಿರುವಾಗಲೇ ಮದುವೆ ಎಂಬ ಬಂಧನದ ಸೆರೆಮನೆಗೆ ನೂಕಿಬಿಡುತ್ತಿದ್ದರು. ಹುಡುಗನಿಗೆ ಆ ವೇಳೆಗಾಗಲೇ ಸುಮಾರು ವಯಸ್ಸಾಗಿದ್ದು. ಹುಡುಗ ಮತ್ತು ಹುಡುಗಿಯರ ವಯಸ್ಸಿನ ಅಂತರ ಅಧಿಕವಾಗಿರುತ್ತಿತ್ತು. ಆದುದರಿಂದ ಹುಡುಗಿ ಋತುಮತಿಯಾಗುವ ವೇಳೆಗೆ ಹುಡುಗ ಮುದುಕನಾಗಿ ಸಾವನ್ನು ತಬ್ಬಿಕೊಳ್ಳುತ್ತಿದ್ದ. ಆ ಕಾರಣದಿಂದ ಆ ಹುಡುಗಿ ಬಾಲ ವಿಧವೆಯಾಗಿತ್ತಿದ್ದಳು. ಪುನರ್ವಿವಾಹ ಸಮಾಜ ಬಾಹಿರವಾದುದರಿಂದ ಆ ಹುಡುಗಿ ಬೇರೆ ಮದುವಯನ್ನೇ ಆಗದೆ. ತನ್ನ ಉಳಿದ ಜೀವನವನ್ನು ಬೇರೆಯವರ ಹಂಗಿನಲ್ಲೇ ಕಟುವಾದ ಮಾತುಗಳನ್ನು ಕೇಳಿಕೊಂಡು ಪರಪುರುಷರ ಮುಳ್ಳಿನಂಥ ದೃಷ್ಟಿಗೆ ಸಿಲುಕಿ ಜೀವನ ಸಾಗಿಸಬೇಕಾಗಿದ್ದಿತು. ಇವೇ ಮುಂತಾದ ಅರ್ಥವನ್ನು ಈ ಗಾದೆ ಬಿಟ್ಟುಕೊಡುತ್ತದೆ. ಬಾಲ್ಯ ವಿವಾಹಕ್ಕೆ ಸಂಬಂಧಿಸಿದಂತೆ, ಅದರಿಂದ ಆಗುವ ಹಾನಿಯ ಬಗ್ಗೆ ಇನ್ನು ಹಲವಾರು ಗಾದೆಗಳಿವೆ. ನಿದರ್ಶನಕ್ಕೆ–

ಆಡೋ ಹುಡುಗಿಗೊಂದು ಕಾಡೋ ಕೂಸೋ

ಬಾಲ್ಯ ವಿವಾಹದ ಪರಿಣಾಮವಾಗಿ ತಾನು ಆಡಿ ನಲಿಯಬೇಕಾದಂಥ ಸಮಯದಲ್ಲಿ ತನಗೊಂದು ಮಗು ಆಗಿ ಆ ಮಗುವನ್ನು ಸಲಹುವ, ಸಂಸಾರದ ಜವಾಬ್ದಾರಿಯನ್ನು ಹೊರುವಂತಾಗಿದೆ. ಎಂಬುದನ್ನು ಆಡುವ ಮಗುವಿಗೆ ಈ ಕಾಡುವ ಕೂಸು ಎಂಬುದಾಗಿ ಜನಪದರು ಈ ಗಾದೆಯ ಮೂಲಕ ತಿಳಿಸಿದ್ದಾರೆ. ಹಾಗೆಯೇ

ಆಳಿನ ಮುದ್ದೆ ನಾಯಿ ಪಾಲು

ಅಜ್ಜನ ಹೆಂಡ್ರು ಹುಡುಗನ ಪಾಲು

ಮುದುಕನ ಹೆಂಡ್ರು ಹುಡುಗನ ಪಾಲು

ಹಳೇ ಬಟ್ಟೆ ಮೆಳೆ ಪಾಲು

ಎಂಬ ಗಾದೆಗಳೂ ಕೂಡ ಬಾಲ್ಯ ವಿವಾಹದ ಪರಿಣಾಮವನ್ನು ತಿಳಿಸುತ್ತವೆ. ಹುಡುಗ, ಹುಡುಗಿಯ ವಯಸ್ಸಿನ ಅಂತರ ಅಧಿಕವಾಗಿದ್ದಾಗ, ಮತ್ತು ಹುಡುಗಿ ಋತುಮತಿಯಾಗುವ ವೇಳೆಗೆ ಹುಡುಗನಿಗೆ ವಯಸ್ಸಾಗಿ ಮುದುಕನಾಗುವುದರಿಂದ ಹಲವಾರು ಸಮಸ್ಯೆಗಳು ಉದ್ಭವಿಸುತ್ತವೆ. ಹುಡುಗಿಗೆ ಆಗ ತಾನೆ ಮೈನೆರೆದು ಮಕ್ಕಳನ್ನು ಹೆರಲು ಬೇಕಾದ ಸ್ಥಿತಿಗೆ ಬಂದಿರುತ್ತಾಳೆ. ಅಂದರೆ ಸಹಜವಾಗಿ ಲೈಂಗಿಕಾಸಕ್ತಿ ಅಧಿಕವಾಗಿರುತ್ತದೆ. ಆದರೆ ಗಂಡ ಎನಿಸಿಕೊಂಡವನು ಆ ಹಂತವನ್ನು ದಾಟಿ ಇಳಿಮುಖದ ಹಂತವಾದ ಮುದುಕನಾಗಿರುತ್ತಾನೆ ಅಂಥ ಸ್ಥಿತಿಯಲ್ಲಿ ಆತ ಹೆಂಡತಿಯ ಜೊತೆ ಸಮರ್ಥವಾಗಿ ಸಂಭೋಗದಲ್ಲಿ ತೊಡಗಲಾರ. ಪರಿಣಾಮ ಹೆಂಡತಿ ಪರರ ಕಡೆ ಕಣ್ಣಾಯಿಸುವುದು ಸಹಜ ಇವೇ ಮುಂತಾದ ಅರ್ಥವನ್ನು ಈ ಗಾದೆಗಳು ಹೊಂದಿವೆ.

ಅಮ್ಮ ಸತ್ರೆ ಅಪ್ಪ ಚಿಕ್ಕಪ್ಪ

ಈ ಗಾದೆಯು ಸಮಾಜದಲ್ಲಿ ಪುರುಷರಿಗೆ ಇರುವ ಅನುಕೂಲಗಳನ್ನು ತಿಳಿಸುತ್ತದೆ. ಅಮ್ಮ ಮತ್ತು ಅಪ್ಪ ಇರುವಾಗ ಮಕ್ಕಳಿಗೆ ಯಾವುದೇ ತೊಂದರೆ ಇರುವುದಿಲ್ಲ. ಆದರೆ ಅಮ್ಮ ಸತ್ತರೆ ಮಕ್ಕಳ ಸ್ಥಿತಿ ಚಿಂತಾಜನಕವಾಗುತ್ತದೆ. ಒಂದು ವೇಳೆ ಅಪ್ಪ ಸತ್ತರೆ ಆಸರೆಯಾಗಿ ತಾಯಿ ಸಂಸಾರದ ನೊಗವನ್ನು ಹೊತ್ತು ದಡ ಮುಟ್ಟಿಸುತ್ತಾಳೆ. ಆದರೆ ಅಂಥ ತಾಯಿಯೇ ಸತ್ತು ಹೋದರೆ ಅಪ್ಪ ಯಾವುದೇ ತೊಂದರೆ ಇಲ್ಲದೆ ಬೇರೊಂದು ಮದುವೆಯಾಗುತ್ತಾನೆ. ಅಪ್ಪನ ಹೆಂಡತಿಯಾಗಿ ಬಂದವಳು ಈ ಮಕ್ಕಳಿಗೆ ತಾಯಿಯಾಗುವುದಿಲ್ಲ ಬದಲಾಗಿ ಮಲತಾಯಿ, ಚಿಕ್ಕಮ್ಮ ಆಗುತ್ತಾಳೆ. ಅವಳ ತಾಳಕ್ಕೆ ತಕ್ಕ ಹಾಗೆ ಕುಣಿಯುವ ಅಪ್ಪ ತಾನೇ ತಾನಾಗಿ ಚಿಕ್ಕಪ್ಪನಾಗುತ್ತಾನೆ. ಎಂಬುದನ್ನು ಗಾದೆ ತಿಳಿಸುತ್ತದೆ. ಇದಕ್ಕೆ ಪೂರಕವಾದ ಗಾದೆಯೆಂದರೆ–

ಮಗ ಸತ್ತರೆ ಮನೆಹಾಳು

ಸೊಸೆ ಸತ್ತರೆ ಸೋಬಾನ

ಈ ಗಾದೆಯೂ ಕೂಡ ಸಮಾಜದಲ್ಲಿ ಪುರುಷನಿಗೆ ಇರುವ ಅನುಕೂಲಗಳನ್ನು ತಿಳಿಸುತ್ತದೆ. ಗಂಡಿಗೆ ಪುನರ್ವಿವಾಹದ ಅವಕಾಶವನ್ನು ಸಮಾಜ ದಯ ಪಾಲಿಸಿದೆ. ಆದರೆ ಹೆಣ್ಣಿಗೆ ಇದು ನಿಷಿದ್ಧ; ಸಮಾಜಬಾಹಿರ. ಅದರಿಂದಲೇ ರೂಪುಗೊಂಡದ್ದು ಈ ಗಾದೆ. ಮನೆಯ ಮುಖ್ಯ ಆಧಾರ ಪುರುಷ ಅಂದರೆ ಮಗ. ಆದುದರಿಂದ ಆತ ಸತ್ತರೆ ವಂಶವನ್ನು ಮುಂದುವರೆಸಲು ಸಾಧ್ಯವಿಲ್ಲ. ಅವರ ವಂಶ ಅಲ್ಲಿಯೇ ನಿಲ್ಲುತ್ತದೆ. ಹಾಗೆಯೆ ಮನೆಯ ಆಸ್ತಿ ಪಾಸ್ತಿ ಇವುಗಳಿಗೆ ವಾರುಸದಾರರಿಲ್ಲದೆ ಹಾಳಾಗುತ್ತದೆ. ಈ ಸಮಾಜದಲ್ಲಿ ಪುರುಷನೇ ಕೇಂದ್ರವಾದುದರಿಂದ ಸರ್ವ ಸಂಪತ್ತಿಗೂ ಆತನೇ ಒಡಯನಾಗುತ್ತಾನೆ. ಆದರೆ ಸೊಸೆ ಸತ್ತರೆ ಯಾವುದೇ ಅಭ್ಯಂತರವಿಲ್ಲ. ಎರಡು ದಿನ ದುಃಖ ಅಷ್ಟೆ. ಸಮಾಜದಲ್ಲಿ ಸ್ತ್ರೀಗೆ ಉನ್ನತ ಸ್ಥಾನವೇನು ಇಲ್ಲದಿರುವುದರಿಂದ, ಸೊಸೆ ಸತ್ತ ಕೆಲವೇ ದಿನಗಳಲ್ಲಿ ಮಗನಿಗೆ ಮತ್ತೊಂದು ಮದುವೆ ಮಾಡುವುದು. ಆ ಮೂಲಕ ವಂಶದ ಬೆಳವಣಿಗೆಗೆ, ಸಂಪತ್ತಿಗೆ ಯಾವುದೇ ರೀತಿಯ ತೊಂದರೆ ಆಗುವುದಿಲ್ಲ. ಎಂಬಿತ್ಯಾದಿ ಅರ್ಥವನ್ನು ಈ ಗಾದೆ ತನ್ನ ಒಡಲಲ್ಲಿ ಅಡಗಿಸಿಟ್ಟುಕೊಂಡಿದೆ.

ಅಲ್ಪನಿಗೆ ಐಸ್ವಿರಿ ಬಂದದ್ಕೆ

ಅರ್ಧರಾತ್ರೀಲಿ ಕೊಡೆ ಹಿಡಿದನಂತೆ

ಈ ಗಾದೆಯು ಅಲ್ಪತನದ ವ್ಯಕ್ತಿಯ ಪೊಳ್ಳುತನವನ್ನು ಪ್ರತಿಬಿಂಬಿಸುತ್ತದೆ. ಹುಟ್ಟಿನಿಂದ ಬಡವನೇ ಆಗಿದ್ದು, ಹಲವಾರು ಕಷ್ಟಗಳನ್ನು ಅನುಭವಿಸಿ, ಹಲವಾರು ಏರು ತಗ್ಗುಗಳನ್ನು ದಾಟಿ ಬಂದಂತಹವನಿಗೆ ಇದ್ದಕ್ಕಿಂತಯೇ ಶ್ರೀಮಂತಿಕೆ ಬಂದರೆ ಅವನು ವರ್ತಿಸುವ ರೀತಿಯನ್ನು ತಿಳಿಸುತ್ತದೆ. ಆಗ ಅವರು ಎಲ್ಲವನ್ನು ಮರೆತು ಬೀಗುತ್ತಾರೆ. ಅವಿವೇಕದಿಂದ ಅಹಂಕಾರಿಗಳಾಗಿ ಮೆರೆಯುತ್ತಾರೆ. ಎಂಥವರನ್ನು 'ಹಲ್ಲಿಡಿದು ನೋಡು'ತ್ತಾರೆ. ಅಂಥ ಸಂದರ್ಭದಲ್ಲಿ ಗಾದೆಯ ಸಿಡಿಗುಂಡು ಹೀಗೆ ಸಿಡಿಯುತ್ತದೆ 'ಇಂದ್ಲದ್ ನೆನ್ಮೊ ಇಮ್‌ಡಿಕೋಳೇತೊಳ್ಕೊ' ಅದರಿಂದಲೂ ಅರಿತುಕೊಳ್ಳದಿದ್ದವನಿಗೆ ಮೇಲಿನ ಗಾದೆಯನ್ನು ಹೇಳಿದ್ದಾರೆ. ಹಾಗೆಯೇ 'ಕೆಟ್‌ಬದುಕಿದವ್ರ ಯೊಗ್ತೀನೆ ಅಸ್ಟು' ಎಂದಿದ್ದಾರೆ. ಇಂಥ ಕಟಕಿ ನುಡಿಯ ಕಹಿಗುಳಿಗೆ ತಿಂದು ಅಲ್ಪನ ಅಹಂಕಾರ ಇಳಿದೀತು; ಹಿಂದಿನದು ಆ ಕ್ಷಣಕ್ಕಾದರೂ ನೆನಪಿಗೆ ಬಂದೀತು. ಮುಂದೆ ಹೇಗೆ ನಡೆಯಬೇಕೆಂಬುದಕ್ಕೆ ದಾರಿ ದೀಪ 'ತುಂಬಿದ ಕೊಡ ತುಳುಕದು' ಎಂಬುದು. ಇದಕ್ಕೆ ಪೂರಕವಾದ ಮತ್ತೊಂದು ಗಾದೆಯೆಂದರೆ ಸುಧಾಕರ ಅವರ ಸಂಗ್ರಹದ–

ಕೈಲಿ ಬ್ಯಾಡರಿ ಮನೇಲಿ ಲಾಟರಿ

ಈ ಗಾದೆಯು ಪ್ರಾಸಕ್ಕಾಗಿ ಬಂದಿರುವಂತೆ ಕಂಡರೂ ಆ ಕುಟುಂಬದ ವಾಸ್ತವ ಚಿತ್ರವನ್ನು ತಿಳಿಸುತ್ತದೆ. ಕೈಯಲ್ಲಿ ಬ್ಯಾಟರಿ ಹಿಡಿದು ಉಳಿದ ಜನರ ದೃಷ್ಟಿಯಲ್ಲಿ ತಾವು ನಾಗರೀಕರು, ಉಳ್ಳವರು ಎಂಬುದನ್ನು ತೋರಿಸುತ್ತಾರೆ. ಆದರೆ ಅದು ತೋರಿಕೆಯೇ ಹೊರತು ನಿಜವಾದ ಸ್ಥಿತಿಯಲ್ಲ. ಮನೆಯಲ್ಲಿ ಊಟಕ್ಕೂ ಶೂನ್ಯ 'ಹೊಟ್ಟೆಯ ಮೇಲೆ ತಣ್ಣೀರು ಬಟ್ಟೆ' ಎಂಬಂತೆ. ಆದುದರಿಂದ ತೋರಿಕೆಯ ಅಹಂಕಾರ ಸರಿಯಾದುದಲ್ಲ ಎಂಬುದು ಗಾದೆಯ ಅಂತರಾರ್ಥ.

ಆನೆಯಂಥದೂ ಮುಗ್ಗರಿಸ್ತದೆ

ಈ ಗಾದೆಯು ಅಂತರಾಳದಲ್ಲಿ ಅಡಗಿರುವ ಸಾಮಾಜಿಕ ಮೌಲ್ಯ ಅತ್ಯಂತ ರಮ್ಯವಾದುದು. ವಾಚ್ಯಾರ್ಥದಲ್ಲಿ ಅಂಥ ಯಾವ ಅರ್ಥವೂ ಕಾಣದಿದ್ದರೂ ಸೂಚ್ಯಾರ್ಥ ಮನನೀಯವಾದುದು. ಆನೆ ಬೃಹತ್ ಗಾತ್ರದ ಪ್ರಾಣಿ, ಅದರ ನಡೆ ಧೀಮಂತವಾದುದು. ಯಾವುದೇ ಒನಪು, ಒಯ್ಯಾರವಿಲ್ಲದಿದ್ದರೂ, ಒಂದು ರೀತಿಯ ಶಿಸ್ತಿನಿಂದ ಕೂಡಿರುತ್ತದೆ. ಅದರ ನಡೆಯಲ್ಲಿ ಯಾವುದೇ ವಕ್ರತೆಗೆ ಆಸ್ಪದವಿರುವುದಿಲ್ಲ. ಆದರೆ ಅಂಥ ಆನೆಯೇ ಒಂದೊಂದು ಬಾರಿ ಮುಗ್ಗರಿಸುತ್ತದೆ ಎಂಬುದು ಗಾದೆಯ ವಾಚ್ಯಾರ್ಥ. ಗಾದೆಗಳು ಸಾಮಾನ್ಯವಾಗಿ ಪ್ರಾಣಿರೂಪಕದ ಮುಖಾಂತರ ಮನುಷ್ಯ ಜೀವನದ ವ್ಯಾಪಾರಗಳನ್ನು ತೆರೆದಿಡುತ್ತದೆ. ಅದೇ ರೀತಿ ಈ ಗಾದೆಯು ಕೂಡ. ಆನೆಗೆ ರೂಪಕವಾಗಿ ಒಬ್ಬ ದೊಡ್ಡ ವ್ಯಕ್ತಿ. ಸಮಾಜದಲ್ಲಿ ಉನ್ನತ ಸ್ಥಾನಮಾನಗಳನ್ನು ಹೊಂದಿರುವ ವ್ಯಕ್ತಿ. ಒಬ್ಬ ಉತ್ತಮ, ಪ್ರಾಮಾಣಿಕ ವ್ಯಕ್ತಿ ಎಂಬುದನ್ನು ಅರ್ಥೈಸಿಕೊಳ್ಳಬೇಕು. ಇಂಥ ವ್ಯಕ್ತಿ ತನ್ನ ಜೀವಮಾನದಲ್ಲಿ ಉತ್ತಮ ಕೆಲಸಗಳನ್ನೇ ಮಾಡುತ್ತಾ ಬಂದಿರುತ್ತಾನೆ. ಜನಸಾಮಾನ್ಯರ ದೃಷ್ಟಿಯಲ್ಲಿ ಮೇಲ್ಮಟ್ಟದ ಸ್ಥಾನವನ್ನು ಪಡೆದಿರುತ್ತಾನೆ. ಆದರೆ ಯಾವುದೋ ಒಂದು ವಿಷಗಳಿಗೆಯಲ್ಲಿ ಯಾವುದೋ ಒಂದು ತಪ್ಪು, ಅಚಾತುರ್ಯ ನಡೆದುಬಿಡುತ್ತದೆ. ಇದನ್ನು ಶ್ರೀಸಾಮಾನ್ಯರು ಈ ರೀತಿ ಹೇಳಿದ್ದಾರೆ. ಆನೆಯಂಥದೂ ಮುಗ್ಗರಿಸುವ ಸಾಧ್ಯತೆ ಇರುವಾಗ ಮನುಷ್ಯ ಮಾತ್ರನಾದವನು ತಪ್ಪು ಮಾಡುವುದು ಸಹಜ. 'ತಪ್ಪು ಮಾಡುವುದು ಸಹಜ, ತಿದ್ದಿನಡೆಯೋನೆ ಮನುಜ' ಎಂಬ ಉಕ್ತಿಯಂತೆ ಮುಂದೆ ಈ ರೀತಿಯ ಯಾವುದೇ ತಪ್ಪು ಮಾಡಬಾರದು ಎಂಬುದೇ ಈ ಗಾದೆಯ ಆಶಯವಾಗಿದೆ. 'ಅಟ್ಟಮೇಲೆ ಒಲೆ ಉರೀತು, ಕೆಟ್ಟ ಮೇಲೆ ಬುದ್ದಿ ಬಂತು' ಎಂಬ ಗಾದೆಯಂತೆ ಬುದ್ದಿ ಕಲಿತು ನಡೆಯುವುದು ಎಂಬುದಾಗಿ ತಿಳಿಸುತ್ತದೆ.

ಆಚಾರ ಬಲ್ದ ಈಚಲ್ಮರ?

ಈ ಜನಪದ ಗಾದೆಯ ಧ್ವನಿ ರಮ್ಯತೆ ಅನನ್ಯ ಸುಂದರ. ಇದು ಸಾರುವ ಜೀವನ ಸಂದೇಶವಾದರೂ ಗಮನಾರ್ಹ, ಈಚಲ ಮರಕ್ಕೆ ಎಷ್ಟೇ ರೀತಿಯಲ್ಲಿ ಉಪಚಾರ ಆರೈಕೆ ಮಾಡಿ

ಬೆಳೆಸಿದರೂ ಅದರ ಜಾತಿಗುಣ ಬಿಡದು. ಉಪಚಾರಕ್ಕೆ ಪ್ರತಿಯಾಗಿ ತನ್ನ ಜಾತಿ ಗುಣಲಕ್ಷಣಕ್ಕೆ ತಕ್ಕಂತೆ ಅಪಕಾರವನ್ನೇ ಮಾಡುವುದು ಅದರ ಸ್ವಭಾವ. ಈ ಗಾದೆಯ ಸೃಷ್ಟಿಕರ್ತರಾದ ಜಾನಪದರು ಈಚಲ ಮರದಿಂದ ಅನೇಕ ಪ್ರಯೋಜನಗಳನ್ನು ಪಡೆಯುತ್ತಾರೆ. ಅದರ ಗರಿಯಿಂದ ಚಾಪೆ ಹೆಣೆದುಕೊಳ್ಳುತ್ತಾರೆ; ಕಡ್ಡಿಯಿಂದ ಮಂಕರಿಗಳನ್ನು ಹೆಣೆದುಕೊಂಡು ಬಳಸುತ್ತಾರೆ. ಸೌದೆಯಾಗಿಯೂ ಬಳಸುತ್ತಾರೆ. ಹಲವೊಮ್ಮೆ ಆ ಮರವನ್ನು ಮುಟ್ಟಾಗಿಯೂ ಬಳಸುವುದುಂಟು. ಇವೆಲ್ಲಕ್ಕಿಂತ ಮಿಗಿಲಾಗಿ ಆ ಮರ ಮತ್ತೇರಿಸುವಂಥ ಹುಳಿ ಹೆಂಡವನ್ನೂ ಕೊಡುತ್ತದೆ; ಮನುಷ್ಯ ಅದನ್ನು ಪಡೆದು ಕುಡಿದು ಮೈಮರೆಯುತ್ತಾನೆಂಬುದೂ ದಿಟ. ಆದರೂ ಈಚಲ ಮರ ತನ್ನ ಜಾತಿ ದುರ್ಗುಣವನ್ನು ಮರೆಮಾಚುವುದಿಲ್ಲ. ಮೈಮರೆತು ಆ ಮರಕ್ಕೆ ಕೈ ಚಾಚಿದರೆ, ಮುಳ್ಳು ಚುಚ್ಚಿ ತಕ್ಷಣ ರಕ್ತ ಹರಿಯುತ್ತದೆ. ಈಚಲು ವನದ ಆಜು ಬಾಜುಗಳಲ್ಲಿ ಓಡಾಡುವ ಸುಸಂಸ್ಕೃತರ ಮರ್ಯಾದೆಯನ್ನು ಕಳೆಯುತ್ತದೆ.

"ಈಚಲು ಮರದ ಕಲ್ಪನೆಯಲ್ಲೇ ರಾಕ್ಷಸತನ, ಕುಸಂಸ್ಕೃತಿ, ಹಾಗೂ ರೂಕ್ಷ ಮುಳ್ಳು ಮೈ, ಕಳ್ಳು ಮನಗಳೆಲ್ಲ ಮನೆ ಮಾಡಿದಂತಿದೆ. ಅದು ಪ್ರತಿ ಹಿಂಸೆಗೆ ಅಣಿಯಾಗಿರುವ ಮುಳ್ಳು ಹಂದಿಯಂತೆ ಕಾಣುತ್ತದೆ. ಹೀಗೆಯೇ ಕೃತಘ್ನರಿಗೆ ಎಷ್ಟೇ ಉಪಕಾರ ಮಾಡಿದರೂ ಪ್ರತಿಯಾಗಿ ಅವರು ಅದೊಂದನ್ನೂ ನೆನೆಯದೆ ಅಪಕಾರವನ್ನೇ ಮಾಡುತ್ತಾರೆ ಈಚಲ ಮರದಂತೆ, ಇಲ್ಲಿನ ಈಚಲ ಮರದ ಪ್ರತಿಮೆ ಅತ್ಯಂತ ಧ್ವನಿ ಪೂರ್ಣವಾಗಿದೆ."[೧]

ಮೇಲಿನ ಗಾದೆಗೆ ಸಂವಾದಿಯಾದ ಮತ್ತೊಂದು ಜನಪದ ಗಾದೆ 'ಉಂಡಮನೆ ಜಂತೇ ಎಣಿಸೋನು' ಎಂಬುದನ್ನು ಇದೇ ಅರ್ಥ ಕೊಡುವ "ಉಂಡಮನೆಗೆ ಕೆಂಡ ಸುರಿಯೋ ಬುದ್ಧಿ' 'ಅನ್ನ ಹಾಕಿದ ಮನೆಗೆ ಕನ್ನ ಹಾಕಿದ' ಇತ್ಯಾದಿಯಾದ ನಾಗರಿಕ ಗಾದೆಗಳನ್ನು ಇಲ್ಲಿ ನೆನೆಯಬಹುದು.

ಇಟ್ಕೊಂಡೋಳು ಇರೋತನಕ

ಕಟ್ಕೊಂಡೋಳು ಕಡೇತನಕ

ಈ ಗಾದೆಯು ಒಂದು ಮಹತ್ವದ ಸಾಮಾಜಿಕ ಮೌಲ್ಯವನ್ನು ಸೂಚಿಸುತ್ತದೆ. ಇಲ್ಲಿ ಹೆಂಡತಿ ಮತ್ತು ಸೂಳೆಗೆ ಇರುವ ಅಂತರ, ಭಿನ್ನತೆ, ಅವರ ಮುಖ್ಯಗುಣ ಸಮಾಜದಲ್ಲಿ ಅವರಿಗಿರುವ ಸ್ಥಾನಮಾನ ಇವೇ ಮುಂತಾದ ಅಂಶಗಳನ್ನು ತಿಳಿಸುತ್ತದೆ. 'ಇಟ್ಕೊಂಡೋಳು' ಎಂದರೆ ಸಮಾಜದ ನಿಯಮಗಳಿಗ

---

೧. ನಂ. ತಪಸ್ವಿಕುಮಾರ - ಕನ್ನಡ ಗಾದೆಗಳ ಸಮೀಕ್ಷೆ, ಪು. ಸಂ. ೪೯

ವಿರುದ್ಧವಾಗಿ, ಪುರುಷನ ಜೊತೆ ಅನೈತಿಕ ಸಂಬಂಧವನ್ನು ಹೊಂದಿರುವಳು. ಇವಳನ್ನು ಸಮಾಜ 'ಸೂಳೆ' ಎಂದೇ ಸಂಬೋಧಿಸುತ್ತದೆ. 'ಕಟ್ಟಿಕೊಂಡೋಳು' ಎಂದರೆ ಸಮಾಜದ ನಿಯಮಗಳ ನೆರಳಿನಲ್ಲಿ ಎಲ್ಲರ ಒಪ್ಪಿಗೆಯ ಮೇರೆಗೆ ಮದುವೆಯಾದವಳು ಹೆಂಡತಿ. ಈಕೆ ಸಮಾಜದಲ್ಲಿ ಒಪ್ಪಿತ ರೀತಿಯಲ್ಲಿ ಗಂಡನ ಜೊತೆ ಸಂಸಾರ ನಡೆಸುತ್ತಿರುತ್ತಾಳೆ. ಇವರ ನಡುವಿನ ಸಂಬಂಧ ಕೊನೆಯವರೆಗೂ ಅಂದರೆ ಸಾಯುವವರೆಗೂ ಇರುತ್ತದೆ. ಮಧ್ಯೆ ಯಾವುದೇ ಕಾರಣ ಒಡ್ಡಿ ಬೇರೆಯಾಗುವುದಿಲ್ಲ. ಹೆಂಡತಿಗೆ ಪತಿಯೇ ಸರ್ವಸ್ವವಾದುದರಿಂದ ಹೆಂಡತಿಯೂ ಕಡೆಯ ತನಕ ತನ್ನ ಗಂಡ ಯಾವುದೇ ಸ್ಥಿತಿಯಲ್ಲಿ ಇದ್ದರೂ ಮುಂದುವರೆಯುತ್ತಾಳೆ: ಸಂಸಾರವನ್ನು ನಿರ್ವಹಿಸುತ್ತಾಳೆ. ಆದರೆ ಅನೈತಿಕ ಸಂಬಂಧವನ್ನು ಹೊಂದಿದವಳು ಈ ರೀತಿಯ ಯಾವುದೇ ಕಟ್ಟಳೆಗೆ ಒಳಗಾಗುವುದಿಲ್ಲ. ಅವಳಿಗೆ ಇವನಿಲ್ಲದಿದ್ದರೆ ಬೇರೊಬ್ಬ. ಆದುದರಿಂದ ಅವಳು 'ಇರೋ ತನಕ' ಮಾತ್ರ. ಇರೋ ತನಕ ಅಂದರೆ ಅವನಲ್ಲಿ ಹಣ ಸಂಪತ್ತು ಇರುವ ತನಕವಾದರೂ ಆಗಬಹುದು ಅಥವಾ ಅವನಲ್ಲಿ ಅವಳಿಗೆ ತೃಪ್ತಿ ನೀಡುವಂತಹ ಯೌವನ ಇರುವ ತನಕವಾದರೂ ಆಗಬಹುದು. ಈ ಎರಡು ಕಳೆದ ಮೇಲೆ ಅವಳಿಗೆ ಇವನ ಅವಶ್ಯಕತೆ ಇರುವುದಿಲ್ಲ ಮತ್ತು ಇರುವ ಕಡೆಗೆ ಅವಳ ದೃಷ್ಟಿ ಹರಿಯುತ್ತದೆ. ಇದರಿಂದ ತಾನೇ ತಾನಾಗಿ ಈತ ದೂರಾಗುತ್ತಾನೆ ಒಟ್ಟಾರೆ ಈ ಗಾದೆಯು ಹೆಂಡತಿ ಮತ್ತು ಸೂಳೆಯ ನಡುವಿನ ವ್ಯತ್ಯಾಸವನ್ನು ತಿಳಿಸುವುದರ ಜೊತೆಗೆ ಹೆಂಡತಿಯ ಪ್ರಾಮುಖ್ಯತೆಯನ್ನು ತಿಳಿಸುತ್ತದೆ.

ಒಂದೊಂದೇ ಕೂದಲು ಕಿತ್ತು ತಲೆಲ್ಲಾ ಬೋಳಾಯ್ತು

ಈ ಗಾದೆ ಬಹುಶಃ ಜೈನ ಸನ್ಯಾಸಿಗಳನ್ನು ಕುರಿತದ್ದು. ಅವರು ಅಹಿಂಸಾ ವಾದಿಗಳು. ಆದುದರಿಂದ ಅವರು ಯಾವುದೇ ಸೂಕ್ಷ್ಮ ಜೀವಿಗಳನ್ನು ಕೊಲ್ಲುವುದಿಲ್ಲ. ಉಸಿರಾಟದ ಹವೆಗೆ ಸೂಕ್ಷ್ಮ ಜೀವಿಗಳು ಸಾಯಬಹುದು ಎಂದು ಅವರು ಬಾಯಿ ಮತ್ತು ಮೂಗಿಗೆ ಬಟ್ಟೆಯನ್ನು ಕಟ್ಟಿಕೊಂಡಿರುವುದನ್ನು ಕಾಣಬಹುದು. ಇದೇ ಕಾರಣದಿಂದ ಅವರು ರಾತ್ರಿ ಪ್ರಯಾಣ ಮಾಡುವುದಿಲ್ಲ. ಏಕೆಂದರೆ ರಾತ್ರಿಯ ಗಾಢ ಕತ್ತಲಲ್ಲಿ ಯಾವ ವಸ್ತುವೂ ಸರಿಯಾಗಿ ಗೋಚರವಾಗುವುದಿಲ್ಲ. ಅಂಥದರಲ್ಲಿ ಸಣ್ಣ ಜೀವಿಗಳು ಕಾಣುವುದು ಎಲ್ಲಿ? ಆದುದರಿಂದ ಕಾಣದ ಕತ್ತಲಲ್ಲಿ ತುಳಿದು ಆ ಸೂಕ್ಷ್ಮ ಜೀವಿಗಳ ಪ್ರಾಣ ಹಾನಿಯಾಗಬಹುದೆಂದು ಅವರು ರಾತ್ರಿ ಪ್ರಯಾಣವನ್ನು ನಿಷೇದಿಸಿದ್ದಾರೆ. ಇಂಥ ಜೈನ ಸನ್ಯಾಸಿಗಳು ತಲೆಯನ್ನು ಬೋಳಿಸಿಕೊಳ್ಳುವುದಿಲ್ಲ. ಕಾರಣ ತಲೆಯಲ್ಲಿ ಇರುವ ಹೇನು ಇತ್ಯಾದಿ ಕ್ರಿಮಿಗಳು ಸಾಯುತ್ತವೆ ಎಂದು. ಆದುದರಿಂದ ಇವರು ಒಂದೊಂದೇ ಕೂದಲನ್ನು ಕಿತ್ತು ಹಾಕುತ್ತಾ ಇಡೀ ತಲೆಯನ್ನು ಬೋಳು ಮಾಡಿಕೊಳ್ಳುತ್ತಿದ್ದ ಸಂಪ್ರದಾಯವೊಂದರಿಂದ ಈ ಗಾದೆ ಜನ್ಮತಾಳಿದ್ದು ಎಂಬುದನ್ನು

ಸೂಚಿಸುತ್ತದೆ. ಹೀಗೆ ಗಾದೆಗಳು ಜನರ ನಡೆ ನುಡಿ ಆಚಾರ, ವಿಚಾರ ಪದ್ಧತಿ ಸಂಪ್ರದಾಯ ಮೊದಲಾದುವುಗಳನ್ನು ಪ್ರತಿಬಿಂಬಿಸುತ್ತ. ಸಂಸ್ಕೃತಿಯ ಸಂಪುಟಗಳಾಗಿರುವುದನ್ನು ಮರೆಯುವಂತಿಲ್ಲ.

'ಅರುಂದತಿ ನಕ್ಷತ್ರ ಕಂಡ್ಯೇನಮ್ಮ'? ಅಂತ ಕೇಳುದ್ರೆ
'ಕಂಡೋಳ ಗಂಡುನ್ನ ತಿಂದ್ಕೊಳ್ಳಿ' ಎಂದಳಂತೆ.

ಈ ಗಾದೆಯು ಮದುವೆಯ ಸಂದರ್ಭದಲ್ಲಿ ನಡೆಯುವ ಒಂದು ಸಂಪ್ರದಾಯವನ್ನು ತಿಳಿಸುತ್ತದೆ. ಮದುವೆಯ ಸಂದರ್ಭದಲ್ಲಿ ತಾಳಿ ಕಟ್ಟುವ ಶಾಸ್ತ್ರ ಮುಗಿದು ಧಾರೆ ಆದ ಮೇಲೆ ಆ ವಧು ವರರನ್ನು ಹೊರಗಡೆಗೆ ಪುರೋಹಿತರು ಕರೆದುಕೊಂಡು ಬಂದು ಆಕಾಶದ ಕಡೆ ತೋರಿಸಿ ಈ ರೀತಿ ಕೇಳುತ್ತಾರೆ. ಆಗ 'ಕಂಡೆ' ಎನ್ನಬೇಕು ಇದು ಸಂಪ್ರದಾಯ. ಆದರೆ ಪುರೋಹಿತರು ಆ ರೀತಿ ತೋರಿಸಿ ಕೇಳುವುದು ಹಗಲು ವೇಳೆಯಲ್ಲಿ. ಅರುಂಧತಿ ನಕ್ಷತ್ರ ಸಾಮಾನ್ಯವಾಗಿ ರಾತ್ರಿ ವೇಳೆ ಗೋಚರವಾಗುವಂತಹುದು. ಆದುದರಿಂದ ಆ ಹಾಡು ಹಗಲಿನಲ್ಲಿ ನಕ್ಷತ್ರ ಕಾಣಲು ಸಾಧ್ಯವಾ? ಆದರೂ ಸಂಪ್ರದಾಯದ ಚೌಕಟ್ಟಿನಲ್ಲಿ 'ಕಂಡೆ' ಎನ್ನಬೇಕು. ಈ ರೀತಿ ತೋರಲು ಕಾರಣ ಇಲ್ಲದಿಲ್ಲ. ಅರುಂಧತಿಯ ಪಾತಿವ್ರತ್ಯ ಭೂಮಿಯ ಎಲ್ಲ ಹೆಣ್ಣು ಮಕ್ಕಳಿಗೂ ಆದರ್ಶವಾಗಿರಲೆಂದು ವಿವಾಹ ಕಾಲದಲ್ಲಿ ನೂತನ ದಂಪತಿಗಳಿಗೆ ವಶಿಷ್ಠ ಅರುಂಧತಿಯರ ನಕ್ಷತ್ರವನ್ನು ತೋರಿಸುವ ಪದ್ಧತಿಯುಂಟು. ಹೀಗೆ ತೋರಿಸುವಾಗ ಪುರೋಹಿತರು ಮದುಮಗಳೊಬ್ಬಳಿಗೆ 'ಅರುಂಧತಿ ನಕ್ಷತ್ರ ಕಂಡ್ಯೇನಮ್ಮ'? ಎಂದು ಕೇಳಿದರು. ಇದಕ್ಕೆ ಆ ಮದುವೆ ಹೆಣ್ಣು 'ಕಂಡೋಳ ಗಂಡುನ್ನ ತಿಂದ್ಕೊಳ್ಳಿ' ಎಂದಳಂತೆ. ಅರುಂಧತಿ ನಕ್ಷತ್ರವನ್ನು ತೋರಿಸುವ ಔಚಿತ್ಯದ ಕಲ್ಪನೆ ಇಲ್ಲದವಳು ಈ ರೀತಿ ಹೇಳಿರಬಹುದು. ವಾಸ್ತವವಾಗಿ ಅರುಂಧತಿ ನಕ್ಷತ್ರವನ್ನು ನೋಡಿದ ಮದುಮಗಳು ಚಿರಸೌಭಾಗ್ಯವತಿಯಾಗಿ ಬಾಳಿ ಇಹಪರ ಸಾಧನಾ ಚತುರಳಾಗುತ್ತಾಳೆ ಎಂಬುದು ಪರಂಪರಾನುಗತ ನಂಬಿಕೆ.

ಕಚ್ಚೆ ಕಟ್ಟೋದೊಂದು ಮಗ ಇಲ್ದಿದ್ರೆ
ಎತ್ತ ಬೇಕಾದ್ರು ಒಡಾಡಿಸ್ತಾರೆ

ಈ ಗಾದೆಯು ಸಮಾಜದಲ್ಲಿ ಗಂಡು ಮಗುವಿಗೆ ಕೊಡುವ ಪ್ರಾಮುಖ್ಯತೆಯನ್ನು ತಿಳಿಸುತ್ತದೆ. ಸಮಾಜದಲ್ಲಿ ಗಂಡು ಮಗುವಿಗೆ ಇರುವಷ್ಟು ಪ್ರಾಮುಖ್ಯತೆ ಹೆಣ್ಣು ಮಗುವಿಗೆ ಇಲ್ಲ. ಆದುದರಿಂದ ಎಲ್ಲರೂ ಗಂಡು ಮಗುವನ್ನೇ ಅಪೇಕ್ಷಿಸುತ್ತಾರೆ. ಗಂಡು ಮಗ ಜನಿಸಿದರೆ ಹೆತ್ತ ತಾಯಿಗೆ ಹೊಗಳಿಕೆಯ ಮಹಾ ಪೂರವೇ ಹರಿದು ಬರುತ್ತದೆ. ಮನೆಯಲ್ಲಿ ಆ ತಾಯಿಗೆ ಎಲ್ಲಿಲ್ಲದ ಪ್ರಾಮುಖ್ಯತೆ ಬಂದುಬಿಡುತ್ತದೆ. 'ವಂಶದ ಕುಡಿಯನ್ನು ಹಡೆದ ತಾಯಿ' ಎಂದು. ಆದರೆ ಅದೇ ತಾಯಿ ಹೆಣ್ಣು ಮಗುವನ್ನು ಹೆತ್ತರೆ

ಹೀಯಾಳಿಕೆ ತಿರಸ್ಕಾರ ಅವಳ ಪಾಲಿಗೆ ಬರುತ್ತದೆ. ಆ ತಾಯಿಯನ್ನು ಬಾಣಂತಿಯಾಗಿದ್ದರೂ ಉಪಚರಿಸುವವರು ಯಾರೂ ಇರುವುದಿಲ್ಲ. ತನಗೆ ಬೇಕಾದುದನ್ನು, ತನ್ನ ಕೆಲಸವನ್ನು ತಾನೇ ಮಾಡಬೇಕಾದಂತಹ ಪರಿಸ್ಥಿತಿ ಅವಳಿಗೆ ಬರುತ್ತದೆ. ಆದುದರಿಂದ ಆ ತಾಯಿ ತಾನು ಹೆಣ್ಣಾದರೂ ಸಮಾಜದ ದೃಷ್ಟಿಯಿಂದ ಗಂಡು ಮಗುವನ್ನೇ ಅಪೇಕ್ಷಿಸುವಂತಹ ದುಸ್ಥಿತಿಗೆ ಬಂದಿದ್ದಾಳೆ. ಒಟ್ಟಾರೆ ಗಂಡು ಮಗು ಹಡೆದರೆ ಅದರಿಂದ ತನಗೂ ಪ್ರಾಮುಖ್ಯ, ಇಲ್ಲದಿದ್ದರೆ ತಿರಸ್ಕಾರಕ್ಕೆ ಗುರಿಯಾಗುತ್ತಾಳೆ ಎಂಬುದನ್ನು ಈ ಗಾದೆಯು ಧ್ವನಿಸುತ್ತದೆ.

> ಕಂಡ ಕಂಡೋರಿಗೆಲ್ಲ ಕೈ ಮುಗಿದರೂ
> ಗಂಡ ಸತ್ತ ಮುಂಡೆಗೆ ಬೋಳಿಸದೆ ಬಿಡಲ್ಲ

ಈ ಗಾದೆಯು ಬ್ರಾಹ್ಮಣ ಸಮಾಜದಲ್ಲಿ ಇದ್ದ ಒಂದು ಸಂಪ್ರದಾಯವನ್ನು ತಿಳಿಸುತ್ತದೆ. ಬ್ರಾಹ್ಮಣ ಸಮಾಜದಲ್ಲಿ ಗಂಡ ಸತ್ತರೆ ಹೆಂಡತಿಗೆ ತಲೆ ಬೋಳಿಸುವುದು ಸಂಪ್ರದಾಯ. ಆ ರೀತಿ ತಲೆ ಬೋಳಿಸುವ ಮೊದಲು ಆಕೆ ಕುಟುಂಬದ ಹಿರಿಯರಿಗೆ ಮತ್ತು ತಮ್ಮ ಸಮಾಜದ ಹಿರಿಯ ಮುಖಂಡರಿಗೆ ನಮಸ್ಕರಿಸಬೇಕು. ಈ 'ಕಂಡ ಕಂಡೋರಿಗೆಲ್ಲ ಕೈ ಮುಗಿದರೂ' ಎಂಬುದರಲ್ಲಿ ಎರಡು ರೀತಿಯ ಅರ್ಥವನ್ನು ಗುರುತಿಸಬಹುದು. ಒಂದು, ಸಂಪ್ರದಾಯದಂತೆ ತಲೆ ಬೋಳಿಸುವ ಶಾಸ್ತ್ರದ ಮೊದಲು ಕೈ ಮುಗಿಯುವುದು. ಎರಡು, ಅಸಹಾಯಕಳಾದ ತನಗೆ ತಲೆ ಬೋಳಿಸಬೇಡಿ ಎಂದು ಗೋಗರೆಯುವುದಕ್ಕಾಗಿ ಕೈ ಮುಗಿಯುವುದು. ಅರ್ಥ ಯಾವುದೇ ಇರಲಿ ಸಂಪ್ರದಾಯದ ಕರಿ ನೆರಳಿನಡಿಯಲ್ಲಿ ಆ ಹೆಂಗಸಿನ ತಲೆ ಬೋಳಿಸಿಯೇ ಬೋಳಿಸುತ್ತಾರೆ. ಇದಕ್ಕೆ ಕಾರಣವೇನು? ಕಾರಣಗಳು ಎರಡು. ಒಂದು, ಆ ರೀತಿ ತಲೆ ಬೋಳಿಸಿದೆ ಎಂದರೆ ಆಕೆ ಗಂಡನನ್ನು ಕಳೆದುಕೊಂಡವಳು, ವಿಧವೆ ಎಂದು. ಮತ್ತೊಂದು ಆ ಹೆಣ್ಣು ಅನ್ಯ ಮಾರ್ಗದ ಮೂಲಕ ಪರಪುರುಷನ ಜೊತೆ ಸಂಬಂಧ ಹೊಂದಬಾರದು ಎಂದು, ಗಂಡ ಸತ್ತಾಗ ಹೆಂಡತಿಗೆ ಇನ್ನೂ ಪ್ರಾಯ ಇದ್ದರೆ ಅವರ ಸಮಾಜದಲ್ಲಿ ಪುನರ್ವಿವಾಹಕ್ಕೆ ಅವಕಾಶವಿಲ್ಲ. ಆದ ಕಾರಣದಿಂದ ಆಕೆ ವಯಸ್ಸಿಗೆ ಸಹಜವಾದ ಆಸೆಗಳಿಂದ ಅನ್ಯ ಮಾರ್ಗವಿಡಿಯಬಹುದು ಎಂಬ ಭಯದಿಂದ ಈ ರೀತಿ ಗಂಡ ಸತ್ತಾಗ ಅವಳ ತಲೆಯನ್ನು ಬೋಳಿಸಿ, ಸಮಾಜಕ್ಕೆ ಈಕೆ ವಿಧವೆ ಎಂದು ಒತ್ತಿ ಹೇಳಿ ಆಕೆಯ ಭವಿಷ್ಯವನ್ನೂ ಸವರುತ್ತಾರೆ. ಇವೇ ಮುಂತಾದ ಅರ್ಥವನ್ನು ಈ ಗಾದೆ ಅಡಗಿಸಿಕೊಂಡಿದೆ. ಆದುದರಿಂದಲೇ ಗಾದೆಗಳನ್ನು 'ಆಕಾರದಲ್ಲಿ ವಾಮನನಂತಿದ್ದರೂ ಅರ್ಥದಲ್ಲಿ ತ್ರಿವಿಕ್ರಮನಂತಿರುವ ಗಾದೆ ಜನಪದ ಜೀವನದ ಸಾರ ಸರ್ವಸ್ವವನ್ನೆಲ್ಲ ಒಳಗೊಂಡಿರುವ ರಸಘಟ್ಟಿ'[೧] ಎಂದಿರುವುದು.

---

೧. ಸುಧಾಕರ – ನಮ್ಮ ಸುತ್ತಿನ ಗಾದೆಗಳು – ಪ್ರಸ್ತಾವನೆ, ಪು. ಸಂ. ೧೧

## ಕಿವಿ ಕಿತ್ತರೂ ಕಿರಿ ಮಗ ಲೇಸು

ತಂದೆ ತಾಯಿಯರಿಗೆ ಕಿರಿಯ ಮಗನ ಮೇಲೆ ಇರುವ ಪ್ರೀತಿಯನ್ನು ತಿಳಿಸುತ್ತದೆ. ಕಿರಿಯ ಮಗ ಎಂದರೆ ಕಡೆಯ ಮಗ, ಅವನು ಚಿಕ್ಕವನು ಅವನಿಗೆ ಸರಿಯಾಗಿ ಏನೂ ತಿಳಿಯುವುದಿಲ್ಲ ಎಂಬಿತ್ಯಾದಿಯಾಗಿ ಅಧಿಕ ಪ್ರೀತಿ ಇರುತ್ತದೆ. ಹಿರೀ ಮಕ್ಕಳಾದರೆ ಅವರು ಆಗಲೇ ದೊಡ್ಡವರಾಗಿ ಜ್ಞಾನ ಸಂಪಾದನೆ ಮಾಡಿರುತ್ತಾರೆ ಎಂಬುದು ಅವರ ನಂಬಿಕೆ. ಆದುದರಿಂದ ಅವರು ಹೇಗೆ ಬೇಕಾದರೂ ಬದುಕಿಕೊಳ್ಳುತ್ತಾರೆ. ಆದರೆ ಕಿರಿಯ ಮಗ ಆ ರೀತಿ ಜೀವನ ಸಾಗಿಸುವುದು ಕಷ್ಟ ಎಂಬ ಭಾವನೆಯಿಂದ ಅಧಿಕ ಪ್ರೀತಿಯನ್ನು ತೋರಿಸುತ್ತಾರೆ. ಆ ಕಿರಿಮಗ ಎನಿಸಿಕೊಂಡವನು ತಂದೆ-ತಾಯಿಯರ ಪ್ರೀತಿಯನ್ನು ಅರಿಯದೆ ತನಗೆ ಅನ್ಯಾಯ ಮಾಡಿದ್ದೀರಿ ಎಲ್ಲ ಅನುಕೂಲಗಳನ್ನು ಹಿರಿಯವರಿಗೆ ಕೊಟ್ಟಿದ್ದೀರಿ ಎಂದು ಅವರ ಮೇಲೆ ಉರಿದುಬೀಳುತ್ತಾನೆ; ಕೋಪ ಮಾಡಿಕೊಳ್ಳುತ್ತಾನೆ. ತಂದೆ-ತಾಯಿಯರನ್ನು ನೋಯಿಸುತ್ತಾನೆ. ಈ ಕಿರಿಮಗ ಎನಿಸಿಕೊಂಡವನು ಏನು ಮಾಡಿದರೂ ಅವನ ಮೇಲಿನ ಪ್ರೀತಿ ಕಡಿಮೆಯಾಗುವುದಿಲ್ಲ. ಅವನು ದುಃಖ ಕೊಟ್ಟರೂ ಅವನ ಬಗ್ಗೆಯೇ ಯೋಚಿಸುತ್ತಿರುತ್ತಾರೆ. ಇದನ್ನು ಬಲ್ಲ ಜನಪದರು ಈ ರೀತಿ ಹೇಳಿದ್ದಾರೆ.

## ಕುನ್ನಿಯಿಂದ ನಾಯಿ ನುಣ್ಣಗೆ

ಈ ಗಾದೆಯು ಅಡಗಿಸಿಕೊಂಡಿರುವ ಸಾಮಾಜಿಕ ಅಂಶ ಧ್ವನಿ ರಮ್ಯತೆಯಿಂದ ಕೂಡಿದೆ. ಕುನ್ನಿ ಎಂದರೆ ಮರಿ. ಬೀದಿ ನಾಯಿಯನ್ನು ಕಂಡು ಹೊಡೆದು ಬಡಿದು ಓಡಿಸುತ್ತಿದ್ದವರು ಅದಕ್ಕೆ ಒಂದು ಮರಿಯಾದರೆ ಏನನ್ನಾದರೂ ಹಾಕುತ್ತಾರೆ. ಮೊದಲು ಹೊಟ್ಟೆಗೆ ಸರಿಯಾಗಿ ಏನೂ ಸಿಗದೆ ಒಣಕಲಾಗಿ ಕೂದಲುಗಳೆಲ್ಲ ಒರಟಾಗಿ ಮಾರ್ಪಟ್ಟಿರುತ್ತದೆ. ಆದರೆ ಅದರ ಮರಿಯ ದೆಸೆಯಿಂದ ಈಗ ಕಾಲ-ಕಾಲಕ್ಕೆ ಸರಿಯಾಗಿ ಊಟ ಸಿಗುತ್ತಿರುವುದರಿಂದ ಮೈತುಂಬಿಕೊಂಡು ಕೂದಲುಗಳೆಲ್ಲ ಉದುರಿ ಮುಟ್ಟಿದರೆ ಜಾರುವ ಆಗಿರುತ್ತದೆ. ಇಷ್ಟೆಲ್ಲಾ ಆದದ್ದು ಕುನ್ನಿಯ ದೆಸೆಯಿಂದ ಆದುದರಿಂದ ಈ ಗಾದೆ ಅರ್ಥವತ್ತಾಗಿದೆ. ನುಣ್ಣಗಾಗು ಎಂದರೆ ಚೆನ್ನಾಗಿ ಆಗು ಎಂಬ ಅರ್ಥವನ್ನು ಇಲ್ಲಿ ನೀಡಬಹುದು. ಇದು ಈ ಗಾದೆಯ ವಾಚ್ಯಾರ್ಥ. ಆದರೆ ಅದರ ಸೂಚ್ಯಾರ್ಥವೇ ಬೇರೆ ಇದೆ. ಸಾಮಾನ್ಯವಾಗಿ ಜನಪದರು ಪ್ರಾಣಿ ರೂಪಕದ ಮೂಲಕ ಮನುಷ್ಯ ಪ್ರಪಂಚದ ವ್ಯಾಪಾರಗಳನ್ನು ಗಾದೆಗಳಲ್ಲಿ ಹಿಡಿದಿರಿಸಿರುತ್ತಾರೆ. ಇದರ ಸೂಚ್ಯರ್ಥ ಹೀಗಿದೆ.

ಒಂದು ಹೆಣ್ಣನ್ನು ಹುರಿದು ತಿನ್ನುತ್ತಿದ್ದವರು. ಹೊತ್ತುಹೊತ್ತಿಗೆ ಸರಿಯಾದ ಊಟ ಕೊಡದೆ ಕಿರುಕುಳ ಕೊಡುತ್ತಿದ್ದವರು ಅವಳಿಗೆ ಒಂದು ಮಗುವಾದರೆ, ಅದರಲ್ಲೂ ಗಂಡು ಮಗುವಾದರೆ ಚೆನ್ನಾಗಿ

ನೋಡಿಕೊಳ್ಳುತ್ತಾರೆ. ಎಳೆ ಮಗುವಿನ ತಾಯಿ ಎಂದು ಯಾವ ಕೆಲಸಕ್ಕೂ ಕರೆಯುವುದಿಲ್ಲ. ಕಾಲಕಾಲಕ್ಕೆ ಬಿಸಿ-ಬಿಸಿ ಊಟ ಉಪಚಾರ ಮಾಡುತ್ತಾರೆ. ಈ ಆರೈಕೆಯಿಂದ ತಾಯಿಯಾದವಳು ರಕ್ತ-ಮಾಂಸ ತುಂಬಿಕೊಂಡು ದುಂಡಗಾಗುತ್ತಾಳೆ. ಇಷ್ಟೆಲ್ಲಾ ಆದದ್ದು ಒಂದು ಮಗುವಿನ ದೆಸೆಯಿಂದ. ಇವೇ ಮುಂತಾದ ಭಾವ ಈ ಗಾದೆಯಲ್ಲಿ ಅಡಗಿದೆ. ಅಂದರೆ ಮಗುವಿನ ದೆಸೆಯಿಂದ ತಾಯಿಗೆ ಪ್ರಾಮುಖ್ಯ ಬಂದು ಚೆನ್ನಾಗಿರುತ್ತಾಳೆ ಎಂಬುದು ಇದರ ಆಶಯವಾಗಿದೆ. ಇದಕ್ಕೆ ಸಂವಾದಿಯಾದ ಮತ್ತೊಂದು ಗಾದೆ ಎಂದರೆ 'ಕರೀನ್ಮರೇಲಿ ಹಸ ಬದಿಕ್ಕಂತು'.

ಯಾರ ಕಾಲಿಗೆ ಬಿದ್ರೂ

ಗಂಡನ ಮನೆಗೆ ಹೋಗೋದು ತಪ್ಪಲ್ಲ

ಈ ಗಾದೆಯ ಸಾಮಾಜಿಕ ಧಾರ್ಮಿಕ ಆಚರಣಾತ್ಮಕ ಹಿನ್ನಲೆ ಹೀಗಿದೆ: ಹಳ್ಳಿಗಾಡಿನಲ್ಲಿ ಮದುವೆಯಾದರೆ ಮದುವಣಿಗ ಹಾಗೂ ಮದುವಣಗಿತ್ತಿ ಇಬ್ಬರೂ ತಂದೆ ತಾಯಂದಿರ, ಅತ್ತೆ ಮಾವಂದಿರ, ಅಜ್ಜ ಅಜ್ಜಿಯರ, ಗುರು ಹಿರಿಯರ ಪಾದಗಳಿಗೆ ನಮಸ್ಕರಿಸಿ ಅವರಿಂದ ಆಶೀರ್ವಾದ ಪಡೆಯುವುದು ಅನೂಚಾನವಾಗಿ ನಡೆದುಕೊಂಡು ಬಂದಿರುವ ನಡವಳಿಕೆ: ಪದ್ಧತಿ. ನಮ್ಮಲ್ಲಿ ಹೆಚ್ಚು ಪಿತೃ ಪ್ರಧಾನ ಕುಟುಂಬಗಳೇ ಇರುವುದರಿಂದ ಮದುವೆಯಾದ ಹೆಣ್ಣು ಬಾಳುವೆ ಮಾಡಲು ಗಂಡನ ಮನೆಗೆ ಹೋಗಿಯೇ ತೀರಬೇಕು. ಆದ್ದರಿಂದ ಹಿರಿಯರ ಪಾದಗಳಿಗೆ ನಮಸ್ಕರಿಸುತ್ತಿದ್ದಾಗ ಯಾರೋ ಒಬ್ಬರು ಹೆಣ್ಣು ಗಂಡಿನ ಮನೆಗೆ ಹೋಗಿಯೇ ತೀರಬೇಕಾದ ಅನಿವಾರ್ಯತೆಯನ್ನು ಮನಗಂಡು ಹೇಳಿದ ಮಾತೇ ಗಾದೆಯಾಗಿ ಬಳಕೆಯಲ್ಲಿದೆ. ಇದು ಹಿನ್ನಲೆ. ಇನ್ನು ಬಳಕೆಯಾಗಿರುವ ನುಡಿಗುಟ್ಟನ್ನು ಪರಿಶೀಲಿಸೋಣ. 'ಕಾಲಿಗೆ ಬೀಳು' ಎಂಬ ನುಡಿಗುಟ್ಟಿಗೆ ನಮಸ್ಕರಿಸು, ಶರಣು ಮಾಡಿಕೊಳ್ಳು, ಆಶೀರ್ವಾದ ಪಡೆದುಕೊಳ್ಳು ಎಂಬ ಅರ್ಥವಿದೆ. ಆಶೀರ್ವಾದ ಪಡೆದುಕೊಳ್ಳುವುದು ಹಿರಿಯರಿಂದ ಮಾತ್ರ ಕಿರಿಯರಿಂದ ಅಥವಾ ಸಮಾನ ವಯಸ್ಕರಿಂದಲ್ಲ. ಅದನ್ನು 'ಕಾಲಿಗೆ ಬೀಳು' ಎಂಬ ನುಡಿಗಟ್ಟು ಪರೋಕ್ಷವಾಗಿ ಸೂಚಿಸುತ್ತದೆ.

ಅರಮನೆ ಇದ್ದರೂ ನೆರಮನೆ ಬೇಕು

ಅರಮನೆ ಇಲ್ದಿದ್ದರೂ ನೆರಮನೆಯಿರಬೇಕು

ಈ ಗಾದೆಯು ಸಮಾಜದಲ್ಲಿನ ಮನುಷ್ಯರ ಪರಸ್ಪರ ಸೌಹಾರ್ದತೆಯನ್ನು ಸೂಚಿಸುತ್ತದೆ. 'ನೆರಮನೆ' ಎಂದರೆ ಅಕ್ಕ-ಪಕ್ಕದ ಮನೆಗಳು. ದಿನನಿತ್ಯದ ಕೆಲಸ ಆರಂಭವಾಗುವುದೇ ಈ ನೆರಮನೆಯನ್ನು ನೋಡಿದ ಅನಂತರವೇ ಬಾಳಿನುದ್ದಕ್ಕೂ, ಅದು ಕಷ್ಟವಾಗಲಿ, ಸುಖವಾಗಲಿ ಧೈರ್ಯ ತುಂಬಲು ಈ

ನೆರಮನೆಯವರು ಅಗತ್ಯ. ಕಷ್ಟದ ಸಂಧರ್ಭದಲ್ಲಿ ಅದರ ಪರಿಹಾರಕ್ಕೆ ಸಹಾಯ ಮಾಡುವುದಲ್ಲದೆ. ಅದನ್ನು ಎದುರಿಸುವ ಎದೆಗಾರಿಕೆಯನ್ನು, ಉಪಾಯನ್ನು ನೀಡುತ್ತಾರೆ. ಸುಖ ಸಂತೋಷಗಳಲ್ಲಿ ಭಾಗಿಯಾಗುತ್ತಾರೆ. ಯಾವುದಾದರು ಕಾರ್ಯಕ್ರಮ ನಡೆದರೆ ಮನೆಯ ಕಾರ್ಯವೆಂಬಂತೆ ನಡೆಸಿಕೊಡುತ್ತಾರೆ. ಅದಕ್ಕೆ ನಮ್ಮ ಜನಪದರು ಹೇಳುತ್ತಾರೆ 'ನೆರೆ ಚೆನ್ನಾಗಿರಬೇಕು', ಒಂದು ವೇಳೆ ನೆರಮನೆಯವರು ಕಿಡಿಗೇಡಿಗಳಾಗಿದ್ದು, ಅಸೂಯ ಪರರಾಗಿದ್ದರೆ ಅಂಥ ಸಂಧರ್ಭದಲ್ಲಿ ಅವರಂತೆ ನಾವು ಆಗಬಾರದು ಎಂದು ಅವರನ್ನೇ ಮಾರ್ಗದರ್ಶಕರನ್ನಾಗಿ ಮಾಡಿಕೊಂಡು ಉತ್ತಮ ಜೀವನ ನಡೆಸಬಹುದು. ಆದರೆ ನೆರಮನೆಯವರು ಒಳ್ಳೆಯವರಾಗಲಿ, ಕೆಟ್ಟವರಾಗಿರಲಿ ಒಂದು ನೆರೆಯಂತು ಇರಲೇಬೇಕು. ಏಕೆಂದರೆ ಆಪತ್ ಕಾಲದಲ್ಲಿ ಅವರು ಎಂತಹವರೇ ಆಗಿದ್ದರೂ ಹೆಗಲು ಕೊಟ್ಟು ನಿಲ್ಲುತ್ತಾರೆ. ಆದುದರಿಂದ ಅದು ಅರಮನೆಯಾದರೂ ಕೂಡ ಅಂದರೆ ಅಲ್ಲಿ ಸಕಲ ಸವಲತ್ತುಗಳಿದ್ದರೂ ಕೂಡ–ನೆರಮನೆ ಇರಬೇಕು. ಅಲ್ಲದೆ ಅರಮನೆ ಇಲ್ಲದೆ ಕೇವಲ ಗುಡಿಸಲು ಇದ್ದರೂ ಕೂಡ ಅಂದರೆ ಯಾವುದೇ ಸವಲತ್ತು ಇರದಿದ್ದರೂ ನೆರಮನೆ ಇರಬೇಕು. ಇವೇ ಮುಂತಾದ ಅಂಶಗಳನ್ನು ಈ ಗಾದೆ ಬಚ್ಚಿಟ್ಟುಕೊಂಡಿದೆ.

ಅವೊತ್ತು ಹೊಟ್ಟೆ ಹಿಡಿಸಿದ್ದು
ಇವೊತ್ತು ಮನೆ ಹಿಡಿಸದೆ?

ಈ ಗಾದೆಯು ಗಂಡನ ಮನೆಯಿಂದ ದೂರಾಗಿ ಸೂತ್ರ ಹರಿದ ಪಟದಂತಿರುವ ಮಗಳ ಜೀವನವನ್ನು, ಮಗಳನ್ನು ಕಂಡು ತಾಯಿಯ ಪ್ರೀತಿಯ ಮಮಕಾರವನ್ನು ತಿಳಿಸುತ್ತದೆ. 'ಹೆಣ್ಣು ಕೆಟ್ಟರೆ ತೌರು, ಕತ್ತೆ ಕ್ಕೆಟ್ಟರೆ ಪಾಳು' ಎಂಬ ಗಾದೆಯಂತೆ ಹೆಣ್ಣು ಗಂಡನಿಂದ ದೂರಾದರೆ ಉಳಿಯುವ ದಾರಿ ತೌರು, ಅದೂ ಮುಚ್ಚಿದರೆ ನೀರು. ಇಲ್ಲಿ ಹೆಣ್ಣು ಗಂಡನ ಮನೆಯಿಂದ ದೂರಾಗಿ ತಾಯಿಯ ಮನೆಗೆ ಬಂದಿದ್ದಾಳೆ. ತಾಯಿಗೆ ಗೊತ್ತು ಮಗಳ ಆ ಪರಿತಾಪ, 'ಹೆಣ್ಣಿನ ಕಷ್ಟ ಹೆಣ್ಣಿಗೇ ಗೊತ್ತು' ಅನ್ನುವ ಹಾಗೆ. 'ಕಣ್ಣರಿಯದಿದ್ದರೂ ಕರುಳರಿಯದೆ', ಆದ್ದರಿಂದ ಮಗಳಿಗೆ ಧೈರ್ಯ ಹೇಳುತ್ತಾಳೆ. ಆ ಹೆಣ್ಣನ್ನು ಅದೇ ತಾಯಿ ಒಂಭತ್ತು ತಿಂಗಳುಗಳ ಕಾಲ ತನ್ನ ಗರ್ಭದಲ್ಲಿ ಇಟ್ಟುಕೊಂಡು, ಹಲವಾರು ನೋವನ್ನು ಅನುಭವಿಸಿ ಹಡೆದಿದ್ದಾಳೆ. ಅಂದು ಎಷ್ಟೆ ಕಷ್ಟವಾದರೂ ತನ್ನ ಹೊಟ್ಟೆಯಲ್ಲಿ ಇಟ್ಟುಕೊಂಡಿದ್ದ ಮಗಳು ಇಂದು ಕೆಟ್ಟು ಬಂದಿರುವಾಗ ಅವಳನ್ನು ಮನೆಯಲ್ಲಿ ಇಟ್ಟುಕೊಂಡು ಊಟ ಹಾಕುವ ಸಾಮರ್ಥ್ಯವಿಲ್ಲವೇ ಎಂಬುದನ್ನು ತಾಯಿ ಹೇಳುತ್ತಾಳೆ. ಇದು ತಾಯಿಗೆ ಮಗಳ ಮೇಲಿರುವ ಪ್ರೀತಿಯನ್ನೂ, ಅನುಕಂಪವನ್ನೂ ತನ್ನ ಮಗಳ ಬಾಳು ಈ ರೀತಿ ಆಯಿತಲ್ಲ ಎಂಬ ದುಃಖವನ್ನು ತಿಳಿಸುತ್ತದೆ.

ಇರುವತನಕ ಇದ್ದು

ಹೆರುವಾಗ ಮಡಕೆ ತೆಗೆದುಕೊಂಡರು

ಈ ಗಾದೆಯು ಸಾಮಾಜದಲ್ಲಿ ರೂಢಿಯಲ್ಲಿರುವ ಮಡಕೆ ತೆಗೆಯುವ ಸಂಪ್ರದಾಯವನ್ನು ತಿಳಿಸುತ್ತದೆ. ಇಲ್ಲಿ ಮಡಕೆ ತೆಗೆಯುವುದು ಎಂದರೆ ಸೂತಕವನ್ನು ತೆಗೆಯುವುದು; ಕಳೆದುಕೊಳ್ಳುವುದು. ಸಾಮಾನ್ಯವಾಗಿ ಹಿಂದೂ ಸಂಪ್ರದಾಯದಲ್ಲಿ ಸೂತಕಗಳು ಹಲವಾರು ಮೂಲಗಳಿಂದ ಬರುತ್ತವೆ. ಮಗು ಜನಿಸಿದರೆ, ಯಾರಾದರೂ ಸತ್ತರೆ, ಹುಡುಗಿ ಋತುಮತಿಯಾದರೆ ಈ ಸೂತಕ ಬರುತ್ತದೆ. ಅದನ್ನು ನಿವಾರಿಸಿಕೊಳ್ಳಲು ಮನೆಯನ್ನು ಸ್ವಚ್ಚಗೊಳಿಸಿ ಇರುವ ಹಳೆಯ ಮಡಕೆಯನ್ನು (ಮಡಕೆ-ಮಣ್ಣಿನ ಪಾತ್ರೆ) ಬಿಸಾಡಿ, ಹೊಸ ಮಡಕೆಯನ್ನು ತಂದು ಅದರಲ್ಲಿ ಏನಾದರೂ ಬೇಯಿಸಿ, ದೇವರ ಮುಂದೆ ಬಡಿಸಿ ಪೂಜೆ ಮಾಡಿಸುತ್ತಾರೆ. ಇದು ಮಡಕೆ ತೆಗೆಯುವ ಶಾಸ್ತ್ರ. ಮಗುವನ್ನು ಹೆತ್ತಾಗಲೂ ಈ ಸೂತಕ ಬರುವುದರಿಂದ ಅದನ್ನು ನಿವಾರಿಸಲು ಮಡಕೆ ತೆಗೆದುಕೊಳ್ಳಬೇಕು. ಆದರೆ ಯಾರೋ ಒಬ್ಬರು ಅದಕ್ಕಾಗಿ ಕಾದಿದ್ದಾರೆ. ಆದರೆ ಹೆರಿಗೆ ತಡವಾದುದರಿಂದ ಬೇರೆ ಯಾವುದೋ ಸೂತಕ ನಿವಾರಣೆಗಾಗಿ ಮಡಕೆ ತೆಗೆದುಕೊಂಡಿದ್ದಾರೆ. ಆದರೆ ದುರಾದೃಷ್ಟವಶಾತ್ ಮಡಕೆ ತೆಗದು ಆದ ಕೆಲವೇ ಕ್ಷಣಗಳಲ್ಲಿ ಹೆರಿಗೆ ಆಗಿದೆ. ಆದುದರಿಂದ ಅವರಿಗೆ ಮತ್ತೆ ಸೂತಕ ಆವರಿಸಿದೆ. ಅವರು ಇದುವರೆಗೂ ಮಾಡಿದ ಕಾರ್ಯ ವಿಫಲವಾಗಿ 'ಹೊಳೆಯಲ್ಲಿ ಹುಣಸೇ ಹಣ್ಣು ತೇಯ್ದ ಹಾಗಾಗಿದೆ.' ಆದುದರಿಂದ ಮನುಷ್ಯನಿಗೆ ತಾಳ್ಮೆ ಮುಖ್ಯ. ಈ ತಾಳ್ಮೆಯನ್ನು ಈ ಗಾದೆ ಧ್ವನಿಸುತ್ತಿದ್ದರೂ ಪರೋಕ್ಷವಾಗಿ ಸಮಾಜದ ಮತ್ತೊಂದು ಮುಖವನ್ನು ತೆರೆದಿಟ್ಟಿದೆ.

ಕೊಟ್ಟ ಹೆಣ್ಣು ಕುಲಕ್ಕೆ ಹೊರಗು

ಈ ಗಾದೆಯ ಮುಖಾಂತರ ಹೆಣ್ಣು ಮತ್ತು ತೌರಿನ ಸಂಬಂಧವನ್ನು ತಿಳಿಯಬಹುದು. ಒಂದು ಹೆಣ್ಣನ್ನು ಮದುವೆ ಮಾಡಿಕೊಡುವ ಮುನ್ನ ಆ ಹೆಣ್ಣು ಕುಲಕ್ಕೆ ಸಂಬಂಧ ಪಟ್ಟವಳಾಗಿರುತ್ತಾಳೆ. ಅಲ್ಲದೆ ಈ ಮನೆಯ ಮಗಳಾಗೆ ಇರುತ್ತಾಳೆ. ಆದರೆ ಆ ಹೆಣ್ಣಿಗೆ ಮದುವೆ ಆದರೆ ಅವಳು ಗಂಡನ ಮನೆಯವಳಾಗುತ್ತಾಳೆ. ಆ ಕುಲಕ್ಕೆ ಸಂಬಂಧ ಪಟ್ಟವಳಾಗಿರುತ್ತಾಳೆ. ಅಲ್ಲದೆ ಆ ಮನೆಯೇ ಅವಳ ಮುಂದಿನ ಬಾಳಿನ ಸರ್ವಸ್ವ ಎಂದಿದ್ದರೂ ಆಕೆ ಅವರ ಸ್ವತ್ತೇ ಹೊರತು, ಅವರ ವಂಶವನ್ನು ಬೆಳೆಸುತ್ತಾಳೋ ಹೊರತು ಈ ಮನೆಯ ಸ್ವತ್ತೂ ಆಗುವುದಿಲ್ಲ. ಈ ಮನೆಯ ವಂಶವನ್ನು ಮುಂದುವರೆಸಿಕೊಂಡು ಹೋಗುವುದಿಲ್ಲ. ತೌರಿನ ಬಗ್ಗೆ ಎಷ್ಟೇ ಪ್ರೀತಿಯಿದ್ದರೂ ಅದು ಕೇವಲ ಬಾಂಧವ್ಯವಾಗಿ ಮಾತ್ರ ಉಳಿಯುತ್ತದೆ. ಸಮಾಜದ ದೃಷ್ಟಿಯಲ್ಲಿ ಆ ಮನೆಯ ಸೊಸೆಯಾಗಿ

ಮುಂದುವರಿಯುತ್ತೇಳೇ ವಿನಃ ಈ ಮನೆಯ ಮಗಳು ಎಂಬುದು ಕಾಲ ಕ್ರಮೇಣ ಮರತೇ ಹೋಗುತ್ತದೆ. ಆ ಹೆಣ್ಣಿಗೆ ಗಂಡನ ಮನೆಯ ಔನ್ನತ್ಯ ಅಧಿಕವಾಗಿರುತ್ತದೆಯೇ ಹೊರತು ತೌರುಮನೆಯದಲ್ಲ. ಏಕೆಂದರೆ ಆ ಮನೆಯಲ್ಲಿ ತಾನಿದ್ದಾಳೆ. ಆದ್ದರಿಂದ ಪರೋಕ್ಷವಾಗಿ ತನ್ನ ಕ್ಷೇಮವನ್ನು ಬಯಸುತ್ತಾಳೆ. ಈ ಎಲ್ಲ ಕಾರಣದಿಂದ ಜನಪದರು ಈ ಗಾದೆಯನ್ನು ಸೃಷ್ಟಿಸಿದ್ದಾರೆ.

ಕೋಣೆ ಮಕ್ಕಳು ಕೊಳೆತವು

ಬೀದಿ ಮಕ್ಕಳು ಬೆಳೆದವು

ಈ ಗಾದೆಯು ಸಾಮಾಜದಲ್ಲಿ ಬಡವರ ಮಕ್ಕಳ ಮತ್ತು ಶ್ರೀಮಂತರ ಮಕ್ಕಳ ಬೆಳವಣಿಗೆಯಲ್ಲಿ ಕಂಡು ಬರುವ ವ್ಯತ್ಯಾಸವನ್ನು ತಿಳಿಸುತ್ತದೆ. ಶ್ರೀಮಂತರ ಮಕ್ಕಳನ್ನು ಅಷ್ಟಾಗಿ ಹೊರಗೆ ಬಿಡುವುದಿಲ್ಲ. ಬದಲಾಗಿ ಯಾವಾಗಲೂ ಮನೆಯ ಒಳಗಡೆಯೇ ಇರಿಸುತ್ತಾರೆ. ಇದರಿಂದ ಆ ಮಕ್ಕಳಿಗೆ ಆರೋಗ್ಯ ಪೂರ್ಣವಾದ ವಾತಾವರಣ ದೊರೆಯುವುದಿಲ್ಲ. ಮಗುವಿನ ಬೆಳವಣಿಗೆಗೆ ಆರೋಗ್ಯ ಪೂರ್ಣವಾದ ವಾತಾವರಣ ಅಷ್ಟೇ ಅವಶ್ಯಕ. ಅಲ್ಲದೆ ಅವರು ಮಕ್ಕಳಿಗೆ ಕೃತಕವಾಗಿ ತಯಾರಾದ ಆಹಾರವನ್ನು ನೀಡುತ್ತಾರೆ. ಇದರಿಂದ ಆ ಮಕ್ಕಳ ಆರೋಗ್ಯ ಕೆಡುವುದಲ್ಲದೆ, ಶಕ್ತಿಯುತವಾಗಿ ಬೆಳೆಯಲಾರದು. ಯಾವುದಾದರೂ ಸಣ್ಣ-ಪುಟ್ಟ ನೋವನ್ನು ಸಹಿಸುವ ಸಾಮರ್ಥ್ಯ ಅವರಲ್ಲಿರುವುದಿಲ್ಲ. ಬಿಸಿಲಲ್ಲಿ ಒಣಗಲು, ಮಳೆಯಲ್ಲಿ ನೆನೆಯಲು, ಚಳಿಯಲ್ಲಿ ನಡುಗಲು, ಧೂಳಲ್ಲಿ ಹೊರಳಾಡಲು ಬಿಡದೆ ಟಾನಿಕ್ ಹಾಳು ಮೂಳು ಮಣ್ಣು ಮಸಿ ನಾಲ್ಕು ಗೋಡೆಗಳ ಮಧ್ಯೆ ಅಂಗೈಯಲ್ಲಿ ಇಟ್ಟುಕೊಂಡು ಸಾಕುವ ಧನಿಕರ ಮಕ್ಕಳು ನೂಲೆಳೆಯಂತೆ ನಾತುಕೊಂಡು ನೇತಾಡುವಂತಿದ್ದರೆ, ಬಿಸಿಲಲ್ಲಿ ಒಣಗಿ, ಮಳೆಯಲ್ಲಿ ನೆನದು, ಚಳಿಯಲ್ಲಿ ನಡುಗಿ, ಧೂಳಲ್ಲಿ ಹೊರಳಾಡುತ್ತಾ ಮುಕ್ತ ಆವರಣದ ಬೀದಿ ಮಕ್ಕಳು ತುಂಡು ತೊಲೆಯಂತೆ ಗಟ್ಟಿ ಮುಟ್ಟಾಗಿದ್ದು ಅದಮ್ಯ ಶಕ್ತಿಯಿಂದ ಕುಣಿದು ಕುಪ್ಪಳಿಸುತ್ತಿರುತ್ತವೆ. ಇವೇ ಮುಂತಾದ ಭಾವಗಳನ್ನು ಈ ಗಾದೆ ಅಡಗಿಸಿಟ್ಟುಕೊಂಡಿದೆ.

ಗದ್ದೆಗೆ ತೆವರಿ ಇರಬೇಕು

ಹೆಣ್ಣಿಗೆ ತವರು ಇರಬೇಕು

ಹೆಣ್ಣಿಗೆ ತೌರಿನ ಅವಶ್ಯಕತೆ ಏನು? ಎಂಬುದನ್ನು ಈ ಗಾದೆಯ ಮುಖಾಂತರ ಜನಪದರು ತೆರೆದು ತೋರಿಸಿದ್ದಾರೆ. ಯಾವುದೇ ಆಪತ್ ಕಾಲದಲ್ಲಾದರೂ ಬೆನ್ನಿಗೆ ಬೆನ್ನುಕೊಟ್ಟು ನಿಲ್ಲುವವರು ತೌರಿನವರು. ಆದುದರಿಂದ ತೌರಿಗೆ ವಿಶೇಷವಾದ ಪ್ರಾಮುಖ್ಯತೆ ಇದೆ. ಹೆಣ್ಣಿನ ಜೀವನದಲ್ಲಿ ಯಾವುದಾದರೂ ಪ್ರವಾಹದಂತೆ ಕಷ್ಟ ಬಂದಾಗ ಅದನ್ನು ತಡೆದು, ಆ ಪ್ರವಾಹದಲ್ಲಿ ಕೊಚ್ಚಿ ಹೋಗದಂತೆ

ತಡೆಯುವವರು ತೌರಿನವರು. ಕಷ್ಟದ, ಆಪತ್ತಿನ ಸಮಯದಲ್ಲಿ ಅವಳಿಗೆ ನೆರವಾಗಲು ತೌರಿನವರು ಇಲ್ಲದಿದ್ದರೆ ಬಿರುಗಾಳಿಗೆ ಸಿಕ್ಕ ತರಗೆಲೆಯಂತೆ ಅವಳ ಜೀವನ ಅಲ್ಲೋಲ ಕಲ್ಲೋಲವಾಗುತ್ತದೆ. ಆದುದರಿಂದ ಹೆಣ್ಣಿಗೆ ತೌರು ಇರಬೇಕು. ಅದೇ ರೀತಿ ಗದ್ದೆಗೆ ತೆವರಿ ಇರಬೇಕು. ಇಲ್ಲದಿದ್ದರೆ ಆ ಗದ್ದೆಯ ನೀರೆಲ್ಲ ಹರಿದು ಬೇರೆ ಕಡೆಗೆ ಹೋಗಿ ಈ ಗಾದೆಯ ಬೆಳೆಗೆ ಆತಂಕ ಬರುತ್ತದೆ. ಇದು ಒಂದರ ಅರ್ಥವನ್ನು ಮತ್ತೊಂದು ಪುಷ್ಟಿನೀಡಲು ಬಂದಿದೆ. ಒಟ್ಟಾರೆ ಗದ್ದಗೆ ತೆವರಿಯ ಅವಶ್ಯಕತೆ ಇರುವ ಹಾಗೆ ಹೆಣ್ಣಿಗೆ ತೌರಿನ ಅವಶ್ಯಕತೆ ಇದೆ.

ಗೂಳೂರು ಗಟ್ಟಿ ಏಳೂರು ಅನ್ನ ಕೆಡಿಸ್ತು.

ಗೂಳೂರು ತುಮಕೂರು ಬಳಿ ಇರುವ ಊರು. ಸುತ್ತಮುತ್ತಲೂ ವೀರಶೈವ ಮತದವರು ಹೆಚ್ಚಾಗಿದ್ದಾರೆ. ಹಿಂದೆ ಇನ್ನೂ ಅಧಿಕ ಸಂಖ್ಯೆಯಲ್ಲಿದ್ದಿರಬೇಕು. ಶೂನ್ಯ ಸಂಪಾದನೆಯ ಸಂಪಾದಕರಲ್ಲೊಬ್ಬನಾದ ಸಿದ್ಧವೀರಣ್ಣೊಡೆಯ ಈ ಗೂಳೂರಿನವನೇ. ಸುತ್ತಮುತ್ತಲೂ ವೀರಶೈವ ಮತದವರ ಸಂಖ್ಯಾ ಬಾಹುಳ್ಯವಿದ್ದುದರಿಂದ ಗೂಳೂರಿನಲ್ಲಿ ವಿಭೂತಿಗಟ್ಟಿಗಳನ್ನು ತಯಾರು ಮಾಡುವವರಿದ್ದರೆಂದು ಕಾಣುತ್ತದೆ. ಹಿಂದೆ ಗೂಳೂರು ವಿಭೂತಿ ಗಟ್ಟಿಗೆ ಪ್ರಖ್ಯಾತವಾಗಿರಬೇಕು: ಈಗ ಗೂಳೂರು ಗಣೇಶ ಪ್ರಖ್ಯಾತವಾಗಿರುವಂತೆ. ವೀರಶೈವರು ವಿಭೂತಿ ಧಾರಣೆ ಮಾಡಿಕೊಂಡ ಹಾಗೆ ವೀರಶೈವೇತರರೂ ಸಹ ಊಟಕ್ಕೆ ಮೊದಲು ಮುಖ ತೊಳೆದು ವಿಭೂತಿ ಧರಿಸುವುದು ರೂಢಿ, ಇಂದಿಗೂ ಬರಿ ಹಣೆಯಲ್ಲಿ ಲಿಂಗಾಯಿತೇತರರು ಹಳ್ಳಿಯಲ್ಲಿ ಊಟ ಮಾಡುವುದಿಲ್ಲ. ಊಟ ಮಾಡಿದ್ದಾರೆ ಎಂಬುದಕ್ಕೆ ಹಣೆಯ ಮೇಲಿನ ವಿಭೂತಿ ಸಾಕ್ಷಿ. ಯಾರೋ ಒಬ್ಬ ಭಕ್ತ, ನೇಮವಂತನೆಂದು ತೋರಿಸಿಕೊಳ್ಳಲೆಂದೋ ಏನೋ ಹಣೆಯ ಮೇಲೆ ದೊಡ್ಡದಾಗಿ ವಿಭೂತಿ ಪಟ್ಟಿ ಎಳೆದುಕೊಂಡು ಯಾವುದೋ ಕಾರ್ಯ ನಿಮಿತ್ತ ಊರಿಗೆ ಹೋದನೆಂದು ಕಾಣುತ್ತದೆ ಅವನ ಹಣೆಯ ಮೇಲಿನ ವಿಭೂತಿ ನೋಡಿ ಊಟವಾಗಿದೆ ಎಂದು ನಿರ್ಧರಿಸಿದ ಜನ ಅವನನ್ನು ಊಟಕ್ಕೆ ಕರೆಯಲಿಲ್ಲ. ಹಸಿದು ಹಣ್ಣಾಗಿ, ಸುತ್ತು ಸುಣ್ಣವಾಗಿ ಊರಿಗೆ ಹಿಂತಿರುಗಿದ ಅವನ ಬಾಯಲ್ಲಿ "ಗೂಳೂರು ಗಟ್ಟಿ ಏಳೂರು ಅನ್ನಕೆಡಿಸ್ತು" ಎಂಬ ಮಾತು ಹೊರಬಿದ್ದಿರಬೇಕು. ಇಲ್ಲಿ ಮುಖ್ಯವಾದುದು ಗೂಳೂರು ವೀರಶೈವ ಮತದವರ ಕೇಂದ್ರವೆಂಬುದನ್ನು. ಅಲ್ಲಿ ವಿಭೂತಿ ಗಟ್ಟಿಗಳನ್ನು ತಯಾರಿಸುತ್ತಿದ್ದರೆಂದು ಈ ಗಾದೆ ಪರೋಕ್ಷವಾಗಿ ಸೂಚಿಸುತ್ತದೆ.

ತಲೆ ಬಿಟ್ಟು ಸಾಸೇವು ಇಕ್ತಾರ?

ಹಿರಿಯೋನ್ನ ಬಿಟ್ಟು ಕಿರಿಯವನಿಗೆ ಮದುವೆ ಮಾಡಕಾಗುತ್ತ? ಎಂಬುದನ್ನು ಮೇಲಿನ ಗಾದೆ ಸೂಚಿಸುತ್ತದೆ. ಹಿರಿಯವನು ಬೇರೆ ಯಾವುದೋ ಹೆಣ್ಣಿನ ಮೇಲೆ ಕಣ್ಣಿಟ್ಟಿರಬಹುದು. ತಾಯಿ ಆ ಹೆಣ್ಣನ್ನು ತಂದುಕೊಳ್ಳಲು ಒಪ್ಪುವುದಿಲ್ಲ ಎಂದು ಖಾತ್ರಿಯಾಗಿರಬಹುದು. ಆದ್ದರಿಂದ ಅವಳ ಮೇಲಿನ ಆಸೆಯನ್ನೂ ಬಿಡಲು ಆಗದೆ, ಬೇರೆ ಹೆಣ್ಣಿನ ಕೈ ಹಿಡಿಯಲೂ ಮನಸ್ಸು ಬಾರದೆ, ಮದುವೆಯ ವಿಷಯ ಎತ್ತಿದಾಗ ಈಗ ಬೇಡವೆನ್ನುತ್ತಾ ಬಂದಿರಬಹುದು. ಆಗ ತಾಯಿ "ನಿನಗೂ ಮದುವೆ ವಯಸ್ಸು ಮೀರಿತು ನನಗೂ ವಯಸ್ಸಾಯ್ತು, ಕೈಲಿ ಕೆಲಸ ಆಗಲ್ಲಾ, ಸೊಸೆ ಬಂದ್ರೆ ನನ್ನ ಕೈಯ ಕೆಲಸ ಕಿತ್ಕೋತ್ತಾಳೆ. ಮದುವೆಯಾಗ" ಎಂದು ಒತ್ತಾಯಿಸಿರಬೇಕು. ಆಗ ಹಿರಿಯ ಮಗ "ಹಂಗಿದ್ದರೆ ಮೊದಲು ತಮ್ಮಯ್ಯನಿಗೆ ಮಾಡಿಬಿಡು ಹೇಗಿದ್ರೂ ಮನೆಗೊಬ್ಬಳು ಸೊಸೆ ಬರ್ತಾಳೆ ನಿನ್ನ ಕಷ್ಟ ತಪ್ತದೆ" ಎಂದು ಸಲಹೆ ಮಾಡಿರಬಹುದು. ಆಗ ತಾಯಿ ಮೇಲಿನ ದೃಷ್ಟಾಂತವನ್ನು ಕೊಟ್ಟಿರಬೇಕು, ಗಾದೆಯನ್ನು ಹೇಳಿರಬೇಕು.

ಮದುವೆಯ ಎಲ್ಲ ಶಾಸ್ತ್ರ ಸಂಬಂಧಗಳಲ್ಲೂ ಹೆಣ್ಣು ಗಂಡುಗಳನ್ನು ಮೇಲೆಬ್ಬಿಸುವುದಕ್ಕಿಂತ ಮುಂಚೆ ಮೂರು ಜನ ಅಥವಾ ಐದು ಜನ ಮುತ್ತೈದೆಯರಿಂದ ಸಾಸೇವು (ಸೇಸೆ) ಇಕ್ಕಿಸುವ ಸಂಪ್ರದಾಯ ಉಂಟು ಮುತ್ತೈದೆಯರು ಎರಡು ಹಿಡಿಯಲ್ಲೂ ಅಕ್ಷತೆ ಹಿಡಿದುಕೊಂಡು ಗಂಡು ಹೆಣ್ಣಿನ ಮಂಡಿಮುಟ್ಟಿ ಆಮೇಲೆ ಭುಜ ಮುಟ್ಟಿ, ಕೊನೆಗೆ ತಲೆಯ ಮೇಲೆ ಅಕ್ಷತೆಯನ್ನು ಹಾಕಬೇಕು. ಕ್ರಮಬದ್ಧವಾದ ಹಂತಗಳನ್ನು ಅನುಸರಿಸದಿದ್ದರೆ, ಸಾಸೇವು ಕೊನೆಗೆ ತಲೆಯನ್ನೇರದಿದ್ದರೆ, ಸಾಸೇವಿಗೆ ಸಾರ್ಥ್ಯಕ್ಯವೇ ಇಲ್ಲ. ಆದ್ದರಿಂದ ಈ ಗಾದೆ ತಲೆಯನ್ನುಳಿದು ಸಾಸೇವು ಇಕ್ಕಿದರೆ ಅದು ಸಾಸೇವು ಎನಿಸಿಕೊಳ್ಳುವುದಿಲ್ಲ ಎಂಬ ಸಂಪ್ರದಾಯ ಆಚಾರವನ್ನು ಒಂದು ಮುಖದಲ್ಲಿ ಪ್ರತಿಬಿಂಬಿಸುವಂತೆಯೇ ಮತ್ತೊಂದು ಮುಖದಲ್ಲಿ ತಲೆ ಎನ್ನುವುದಕ್ಕೆ ಹಿರಿಯ ಎಂಬ ಅರ್ಥ ಅನ್ವಯವಾಗಿ ಹೇಗೆ ತಲೆಬಿಟ್ಟು ಸಾಸೇವು ಇಕ್ಕಬಾರದೋ ಹಾಗೆ ಹಿರಿಯವನನ್ನು ಬಿಟ್ಟು ಕಿರಿಯವನಿಗೆ ಮದುವೆ ಮಾಡಬಾರದು ಎಂಬ ಬುದ್ಧಿವಾದ ಅಥವಾ ಎಚ್ಚರಿಕೆಯನ್ನು ಸೂಚಿಸುತ್ತದೆ.

ತಲೆ ಎಂಬುದಕ್ಕೆ ಹಿರಿಯ ಹಿರಿಮಗ ಎಂಬ ಅರ್ಥವಿದೆ. ಇದೇ ಅರ್ಥವನ್ನು ಸೂಚಿಸುವ ಗಾದೆಯಲ್ಲಿ ಅಡಗಿರುವ ಸಮಾಜದ ಸಂಪ್ರದಾಯವೊಂದನ್ನು ತೆರೆದಿಡುತ್ತದೆ.

ತಂದೆಗೆ ತಲೆ ಮಗ

ತಾಯಿಗೆ ಕಿರಿ ಮಗ

ಈ ಗಾದೆಯು ತಂದೆ ತಾಯಿಯರು ಸತ್ತಾಗ ಮಾಡಬೇಕಾದ ಉತ್ತರ ಕ್ರಿಯೆಯಲ್ಲಿ ಇರುವ ಸಂಪ್ರದಾಯವನ್ನು ತಿಳಿಸುತ್ತದೆ. ಹಿಂದೂ ಸಮಾಜದಲ್ಲಿ ಒಂದೊಂದು ವಿಧಿವಿಧಾನಗಳಿಗೂ ಬೇರೆ ಬೇರೆ

ರೀತಿಯ ಸಂಪ್ರದಾಯ, ನಿಯಮಗಳಿವೆ. ಅದರಂತೆ ತಂದೆ-ತಾಯಿಯರ ಉತ್ತರ ಕ್ರಿಯೆಯಲ್ಲಿ ಕೂಡ ಬೇರೆ-ಬೇರೆ ನಿಯಮವಿದೆ. ತಂದೆ ಸತ್ತರೆ ಆತನ ಉತ್ತರ ಕ್ರಿಯೆಯಲ್ಲಿ ಸಕ್ರಿಯವಾಗಿ ಭಾಗಿಯಾಗಬೇಕಾದವನು ತಲೆ ಮಗ ಅಂದರೆ ಹಿರಿಯ ಮಗ. ತಂದೆಯ ಶವಕ್ಕೆ ಅಗ್ನಿ ಸ್ಪರ್ಶ ಮಾಡುವುದರಿಂದ ಹಿಡಿದು, ಹನ್ನೊಂದನೆಯ ದಿನ ನಡೆಯುವ ಕ್ರಿಯೆಯಲ್ಲಿ ತಲೆ ಬೋಳಿಸಿಕೊಂಡು, ಮಡಕೆ ಒಡೆಯುವುದು ಮತ್ತು ತಂದೆಗೆ ಪಿಂಡ ಇಡುವುದು ಹಿರಿಯ ಮಗನ ಕರ್ತವ್ಯ. ಇದು ಸಮಾಜದಲ್ಲಿ ನಿಯಮ ಬದ್ದವಾದ್ದು. ತಾಯಿ ಸತ್ತರೆ ಆಕೆಯ ಉತ್ತರ ಕ್ರಿಯೆಯಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳಬೇಕಾದವನು ಕಿರಿಯ ಮಗ. ತಾಯಿಯ ಶವಕ್ಕೆ ಅಗ್ನಿ ಹೊತ್ತಿಸಿ, ಹನ್ನೊಂದನೆಯ ದಿನದ ಕಾರ್ಯದಲ್ಲಿ ತಲೆ ಬೋಳಿಸಿಕೊಂಡು, ಮಡಕೆ ಒಡೆಯುವುದಲ್ಲದೆ ತಾಯಿಗೆ ಪಿಂಡ ಇಡುವವನು ಕಿರಿಯ ಮಗ. ಈ ರೀತಿಯಾಗಿ ಹಿರಿಯ ಮತ್ತು ಕಿರಿಯ ಮಗನ ಜವಾಬ್ದಾರಿಯನ್ನು ಇದು ತಿಳಿಸುತ್ತದೆ. ಅಲ್ಲದೆ ಸಮಾಜದ ಸಂಪ್ರದಾಯವೊಂದು ತೆರೆದುಕೊಳ್ಳುತ್ತದೆ.

ಹಾಗೆಯೇ ಸಮಾಜದಲ್ಲಿ ಹಿರಿಯ ಮಗನ ಕರ್ತವ್ಯ ಮತ್ತು ಅವನ ಕಷ್ಟ ನಷ್ಟಗಳನ್ನು ಕುರಿತು ಗಾದೆಯೊಂದು ಈ ರೀತಿ ಹೇಳುತ್ತದೆ.

ಮುಂದಾಗಿ ಹುಟ್ಯೊ
ಮುಗಳ ರಾಗಿ ಹೊತ್ಯೊ

ಮುಂದಾಗಿ ಹುಟ್ಯೊ ಎಂದರೆ ಮುಂದಾಗಿ ಹುಟ್ಟಿದವನು, ಮೊದಲು ಹುಟ್ಟಿದವನು. ಅಂದರೆ ಹಿರಿಯ ಮಗ ಎಂದರ್ಥ. ಮನೆಯಲ್ಲಿ ಮೊದಲು ಜನಿಸಿದವನು. ಆ ಸಂಸಾರದ ಭಾರವನ್ನು ಹೊರಬೇಕಾಗುತ್ತದೆ. ತಂದೆಯ ಅನಂತರ ಆತನೇ ಯಜಮಾನ. ಆದುದರಿಂದ ಆ ಮನೆಯ ವ್ಯವಹಾರದ ಚಿಂತೆ ಈತನದೇ ಆಗಿರುತ್ತದೆ. ತನ್ನ ಅನಂತರ ಹುಟ್ಟಿದ ತಮ್ಮಂದಿರ, ತಂಗಿಯರ ಪಾಲನೆ, ಪೋಷಣೆ ಮಾಡಿ ಅವರಿಗೆ ಒಂದು ದಾರಿ ಮಾಡಿಕೊಡುವುದು, ಅವರಿಗೆ ಮದುವೆ ಮುಂತಾದ ಕಾರ್ಯಗಳನ್ನು ಮಾಡುವುದು ಇವೇ ಮುಂತಾದ ಹಲವಾರು ಸಂಸಾರ ಭಾರಗಳು ಅವನ ಮೇಲಿರುತ್ತವೆ. ಆದುದರಿಂದ ಅವನ ಜೀವನ ಕಷ್ಟ ದುಃಖಗಳಲ್ಲೆ ಮುಂದುವರಿಯುತ್ತದೆ. ಇವೇ ಮುಂತಾದುವನ್ನು ಮೇಲಿನ ಗಾದೆ ತಿಳಿಸುತ್ತದೆ. ಇಲ್ಲಿ 'ಮುಗಳ' ಅಂದರೆ ಮೂರು ಕೊಳಗ (ಕೊಳಗ ಧಾನ್ಯವನ್ನು ಅಳೆಯುವ ಸಾಧನ. ಇದು ಸಾಮಾನ್ಯವಾಗಿ ಆರು ಸೇರು ಅಥವಾ ಏಳು ಸೇರು ಧಾನ್ಯವನ್ನು ಹಿಡಿಯುತ್ತದೆ) ಮೂರು ಕೊಳಗ ರಾಗಿಯನ್ನು ಹೊತ್ತು ನಡೆದುಕೊಂಡು ಹೋದರೆ ಯಾವ ರೀತಿಯ ಶ್ರಮ ಉಂಟಾಗುತ್ತದೋ ಅದೇ ರೀತಿ ಹಿರಿಯ ಮಗನ ಸಂಸಾರ ಶ್ರಮಭರಿತವಾದುದು ಎಂಬುದು ಈ ಗಾದೆಯ ಅಂತರಾರ್ಥವಾಗಿದೆ.

ತಾಯಿ ಮಾತು ಮೀರಿದೋನು ನಾಯಿಗಿಂತ ಕಡೆ

ಈ ಗಾದೆಯು ತಾಯಿಯ ಪ್ರಾಮುಖ್ಯತೆಯನ್ನು ತಿಳಿಸುತ್ತದೆ. ತಾಯಿ ಎಂಬುವವಳು ಪ್ರಮುಖವಾದವಳು. ಅವಳು ಯಾವುದೇ ಮಾತನ್ನು ಹೇಳಿದರೂ ಬಹಳ ಆಲೋಚಿಸಿ ಹೇಳಿರುತ್ತಾಳೆ. ಅಲ್ಲದೆ ಆ ಮಾತು ಮಗನ ಕ್ಷೇಮದ ದೃಷ್ಟಿಯಿಂದಲೇ ಹೇಳಿದ ಮಾತಾಗಿರುತ್ತದೆ. ತಾಯಿಗೆ ಮಗನ ಔನ್ನತ್ಯ ಮತ್ತು ಯೋಗಕ್ಷೇಮ ಮುಖ್ಯವಾಗಿರುತ್ತದೆ. ತಾಯಿಗೆ ಮಕ್ಕಳ ಹೊರತು ಬೇರಾವುದರಲ್ಲೂ ಪ್ರೀತಿ ಇರುವುದಿಲ್ಲ. ಆದುದರಿಂದ ಅವಳ ಮಾತು ಕೇಳಲರ್ಹವಾಗಿರುತ್ತದೆ. ಕೇಳದೆ ಮುಂದುವರಿದರೆ ಅನಾಹುತಗಳಾಗುವ ಸಂಭವ ಇರುತ್ತದೆ. ಯಾರೋ ಒಬ್ಬನು ದುರಹಂಕಾರದಿಂದ ತಾಯಿಯ ಮಾತನ್ನು ಅಲಕ್ಷಿಸಿ ಮುಂಬರಿದಿರಬೇಕು. ಆದರೆ ಹಿಡಿದ ಕಾರ್ಯ ಕೈಗೂಡದೆ ಕೈಸುಟ್ಟುಕೊಂಡಿರಬೇಕು. ಇದನ್ನು ಗಮನಿಸಿದ ಸಾಮಾನ್ಯ ಜನರು ಈ ರೀತಿ ಹೇಳಿರಬೇಕು. ನಾಯಿ ನಿಯತ್ತಿಗೆ ಮತ್ತೊಂದು ಹೆಸರು. ಅದು ಒಡೆಯನ ಆಜ್ಞಾ ಪಾಲಕನಾಗಿರುತ್ತದೆ. ಅಂಥ ನಾಯಿಯೇ ಹೇಳಿದ ಮಾತನ್ನು ಕೇಳುತ್ತದೆ. ಆದರೆ ಇವನು ಅದಕ್ಕಿಂತಲೂ ಕೀಳು ಹೇಳಿದ ಮಾತನ್ನು ಕೇಳುವುದಿಲ್ಲ ಎಂಬುದು ಈ ಗಾದೆಯ ಧ್ವನಿಯಾಗಿದೆ.

ತಾಲಿ ಕಟ್ಟಿದ್ದು ಆದ್ಮೇಲೆ
ತೋಟಿಯಾದ್ರೂ ಗಂಡನೇ

ಸಮಾಜದಲ್ಲಿ ತಾಲಿಗೆ ಕೊಡುವ ಗೌರವ ಮಹತ್ವವನ್ನು ಈ ಗಾದೆಯು ತಿಳಿಸುತ್ತದೆ. ಒಂದು ಗಂಡು, ಒಂದು ಹೆಣ್ಣು ಕೂಡಿ ಸಮಾಜಬದ್ದವಾಗಿ ಸಂಸಾರ ಮಾಡಬೇಕಾದರೆ ಮದುವೆ ಆಗುವುದು ಮುಖ್ಯ. ತಾಲಿ ಐದು ಮುತ್ತುಗಳಲ್ಲಿ ಒಂದು. ಐದು ಮುತ್ತುಗಳನ್ನು ಹೊಂದಿದವಳನ್ನು 'ಮುತ್ತೈದೆ' ಎಂದು ಕರೆಯುತ್ತಾರೆ. ಆದುದರಿಂದ ಸಮಾಜದಲ್ಲಿ ತಾಲಿಯು ತನ್ನದೇ ಆದ ಪ್ರಾಮುಖ್ಯತೆಯನ್ನು ಹೊಂದಿದೆ. ಅದನ್ನು ಕುತ್ತಿಗೆಯಲ್ಲಿ ಸಾಯುವವರೆಗೂ ಕಟ್ಟಿಕೊಂಡಿರಬೇಕು. ಮಧ್ಯ ತೆಗೆಯಬೇಕೆಂದರೆ ಅದನ್ನು ಕಟ್ಟಿದ ಗಂಡ ಸಾಯಬೇಕು. ವಿಧವೆಯಾದವಳು ತಾಲಿಯನ್ನು ಧರಿಸುವಂತಿಲ್ಲ. ಆದುದರಿಂದ ತಾಲಿಯನ್ನು ಕಟ್ಟಿದ ಮೇಲೆ ಕಟ್ಟಿದವನೇ ಗಂಡ, ಅವನು ಸುಂದರವಾಗಿರಬಹುದು, ಕುರೂಪಿಯಾಗಿರಬಹುದು, ಬಡವನಿರಬಹುದು, ಶ್ರೀಮಂತನಿರಬಹುದು ಏನಾದರೂ ಅವನು ಗಂಡನೆ. ಅವನೊಡನೆಯೇ ಆಕೆ ಸಂಸಾರ ಮಾಡಲೇಬೇಕು. ಇದು ನಿಯಮಬದ್ದವಾದುದು. ಇದಕ್ಕೆ ಸಂವಾದಿಯಾದ ಗಾದೆಯೆಂದರೆ–'ಕುಂಟಿಯಾಗಲಿ, ಕುರುಡಿಯಾಗಲಿ ತಾಲಿ ಕಟ್ಟಿದವಳು ಲೇಸು' ಇದು ಪುರುಷ ಸ್ತ್ರೀಗೆ ತಕ್ಕವನಾಗಿರಬೇಕು ಎಂಬುದನ್ನು ತಿಳಿಸುತ್ತದೆ.

ತಿರ್‍ಕೊಂಡು ತಂದ್ರು ಕರ್‍ಕೊಂಡುಣ್ಣು

ಈ ಗಾದೆಯು ಜನಸಾಮಾನ್ಯರ ಮನೋಧರ್ಮವನ್ನು ತ್ಯಾಗ ಗುಣಗಳನ್ನು ಸೂಚಿಸುತ್ತದೆ. ಜನಪದರು ಯಾವಾಗಲೂ ತಮ್ಮನ್ನು ತಾವೇ ನೋಡಿಕೊಳ್ಳುವುದಿಲ್ಲ. ತಮ್ಮ ಸುತ್ತಮುತ್ತಲಿನವರನ್ನು ತಮ್ಮೊಡನೆ ಅವರೂ ನಮ್ಮವರೇ ಎಂಬ ಭಾವನೆಯನ್ನು ಹೊಂದಿರುತ್ತಾರೆ. ಇದ್ದದ್ದನ್ನು ಹಂಚಿ ಉಣ್ಣುವ ಮನೋಧರ್ಮ ಇವರದು. ತಮ್ಮಲ್ಲಿ ಅಧಿಕವಾಗಿ ಇಲ್ಲದಿದ್ದರೂ ಇರುವಷ್ಟನ್ನು ಹಂಚಿ ತಿನ್ನುತ್ತಾರೆ. 'ಹಂಚಿ ಉಂಡರೆ ಹಸಿವಿಲ್ಲ' ಎಂಬ ಗಾದೆಯಂತೆ ಒಂದು ಪಕ್ಷ ಜನ ಸಾಮಾನ್ಯರಾದ ಜನಪದರು ತಿರಿದುಕೊಂಡು ಅಂದರೆ ಭಿಕ್ಷೆ ಬೇಡಿ ತಂದರೂ ಅದನ್ನು ಹಂಚಿ ಉಣ್ಣು ಎನ್ನುತ್ತಾರೆ. ಇದೊಂದು ನೀತಿಯಂತೆ ಇದೆ.

ತೇರು ಆದ್ಮೇಲೆ ಜಾತ್ರೆಗೆ ಹೋಗಬ್ಯಾಡ
ಧಾರೆ ಆದ್ಮೇಲೆ ಮದುವೆಗೆ ಹೋಗಬ್ಯಾಡ

ಈ ಗಾದೆಯು ಎರಡು ವಿಷಯಗಳ ಕಡೆಗೆ ಗಮನ ಸೆಳೆಯುತ್ತದೆ. ಜಾತ್ರೆಯಲ್ಲಿ ತೇರು ಎಳೆಯುವುದು ಪ್ರಮುಖವಾದುದು. ಜಾತ್ರೆ ಹಲವಾರು ದಿನಗಳು ನಡೆಯುತ್ತದೆ. ಆ ಜಾತ್ರೆಯಲ್ಲಿ ಪ್ರತಿಯೊಂದು ದಿನವೂ ವಿವಿಧ ಉತ್ಸವಗಳು ನಡೆಯುತ್ತವೆ. ಜಾತ್ರೆಯ ಕಡೆಯ ದಿನ ತೇರು ಎಳೆಯುವುದು ರೂಢಿ. ತೇರು ಎಳೆಯುವ ದಿನ ಸುತ್ತಮುತ್ತಲ ಹಳ್ಳಿಗಳಿಂದ ಸಾವಿರಾರು ಜನರು ನೆರೆದು ದೈವಭಕ್ತಿಗೆ ಪಾತ್ರರಾಗುತ್ತಾರೆ. ಎಳೆಯುವ ತೇರಿಗೆ ತಾವೂ ಕೈ ಜೋಡಿಸುತ್ತಾರೆ. ಜಾತ್ರೆಯಲ್ಲಿ ತೇರು ಎಳೆಯುವುದು ಆದ ಮೇಲೆ ಜಾತ್ರೆಗೆ ತೆರೆ ಬಿದ್ದಂತೆಯೇ ಅರ್ಥ. ಮತ್ತೊಮ್ಮೆ ಜಾತ್ರೆ ಆರಂಭವಾಗುವುದು ವರುಷದ ಅನಂತರ ಆದುದರಿಂದ ತೇರು ಆದ ಮೇಲೆ ಜಾತ್ರೆಗೆ ಹೋಗುವುದರಿಂದ ಯಾವ ಔಚಿತ್ಯವೂ ಇರುವುದಿಲ್ಲ. ಹೋದರೂ ಪಾಳು ಪಾಳು ಏನಿದ್ದರೂ ತೇರಿಗೆ ಮೊದಲೇ ಅಥವಾ ತೇರಿಗಾದರೂ ಹೋಗಬೇಕು.

ಹಾಗೆಯೇ ಮದುವೆಯ ಸಂದರ್ಭದಲ್ಲಿ ಧಾರೆ ಮುಖ್ಯವಾದುದು. ಧಾರೆ ಸಮಾಜದಲ್ಲಿನ ಒಂದು ಸಂಪ್ರದಾಯ. ಧಾರೆ ಎಂದರೆ ಮುಹೂರ್ತ ಎಂದು ಅರ್ಥ. ಗಂಡು ಹೆಣ್ಣಿನ ಕೈಯನ್ನು ಹಿಡಿಸಿ. ಅವರ ಕೈಮೇಲೆ ಎಲೆ, ಕಾಯಿ ಇಟ್ಟು, ಹೆಣ್ಣಿನ ತಂದೆ ತಾಯಿಗಳು, ಗಂಡಿನ ತಂದೆ ತಾಯಿಗಳು ಹಾಲು ಬಿಡುವುದನ್ನು ಧಾರೆ ಎರೆಯುವುದು ಎನ್ನುವರು. ಧಾರೆಯೇ ಮುಖ್ಯ ಅದಕ್ಕೂ ಮೊದಲು ಹಲವಾರು ಶಾಸ್ತ್ರಗಳು ನಡೆದಿದ್ದರೂ ಅವು ಅಮುಖ್ಯ ಧಾರೆ ಆದ ಮೇಲೆ ಮದುವೆಯ ಶಾಸ್ತ್ರ ಮುಗಿದಂತೆ. 'ಧಾರೆ ಆದ್ಮೇಲೆ ಮದುವೆ ಆದ್ಹಂಗೆ, ಕಾರ ಆದ್ಮೇಲೆ ಸಾರು ಆದ್ಹಂಗೆ' ಎಂಬ ಗಾದೆಯಂತೆ ಧಾರೆ ಆದರೆ ಮದುವೆಗೆ ತೆರೆ ಬೀಳುತ್ತದೆ. ಆದುದರಿಂದ ಮದುವೆಗೆ ಹೋಗಬೇಕಿದ್ದರೆ ಧಾರೆಗೆ ಮೊದಲೇ ಹೋಗಬೇಕು. ಎಂಬುದನ್ನು ಈ ಗಾದೆಯು ತಿಳಿಸುತ್ತದೆ.

ಕೋರಿ ಕಟ್ಕೋಂಡು ಬೇರೆ ಒಲೆ ಹೂಡಬ್ಯಾಡ

ಹೋರಿ ಕಟ್ಕೋಂಡು ಗರಿಕೆ ಹೊಲ ಉಳಬ್ಯಾಡ

ಕೋರಿ (ಕುವರಿ, ಕುಮಾರಿ) ಎಂದರೆ ಇನ್ನೂ ಅನುಭವವಿಲ್ಲದ, ತಲೆ ತಾಕದ ಹೊಸ ಹರೆಯದ ಹೆಣ್ಣು. ಅವಳ ಮಾತಿಗೆ ಮರುಳಾಗಿ, ಅವಿಭಕ್ತ ಕುಟುಂಬವನ್ನು ತೊರೆದು ಪಾಲು ತೆಗೆದುಕೊಂಡು ಬೇರೆ ಹೋದರೆ ಹೇಳೋರು ಕೇಳೋರು ಇಲ್ಲದೆ ಆಡಿದ್ದೇ ಆಟ ಹೂಡೆದ್ದೇ ಲಗ್ಗೆಯಾಗಿ ಬೇಗ ದಿವಾಳಿ ಏಳುವ ಸಾಧ್ಯತೆ ಇರುವುದರಿಂದ ಹಾಗೆ ಮಾಡುವುದು ವಿವೇಕ ಬಾಹಿರ ಎಂದು ಹೇಳುವ ಮೊದಲನೆಯ ಸಾಲಿನ ಭಾವಕ್ಕೆ ಎರಡನೆಯ ಸಾಲಿನ ಭಾವ ಪೋಷಕವಾಗುತ್ತದೆ. ಹೋರಿ ಎಂದರೆ ಇನ್ನೂ ಉಳುಮೆಗೆ ಪಳಗಿರದ, ಹೆಗಲು ಕೂತಿರದ (ನೊಗದ ಉಜ್ಜುವಿಕೆಯನ್ನು ತಡೆಗಟ್ಟುವ ಜಡ್ಡುಗಟ್ಟಿದ ಚರ್ಮ ಇನ್ನೂ ಸಿದ್ಧವಾಗದಿರುವಂಥದು ಚರ್ಮ ಕೀಳುವ ಉರಿಯಿಂದ ಚಡಪಡಿಸುವ ಅವಸ್ಥೆಯಲ್ಲಿ ಇರುವಂಥದು) ಪಡ್ಡೆ ವಯಸ್ಸಿನದು. ಅಂಥ ಹೋರಿಯನ್ನು ಕಟ್ಟಿಕೊಂಡು ಹುಲ್ಲಿಲ್ಲದ ಹೊಲವನ್ನು ಉಳುವುದೇ ಕಷ್ಟ. ಏಕೆಂದರೆ ಹೆಗಲು ನೋವಿನಿಂದ ಎತ್ತೆಂದರೆ ಅತ್ತ ನುಗ್ಗುವ ಅಥವಾ ನೊಗವನ್ನು ಕೆಳಕ್ಕೆಸೆದು ನಿಲ್ಲುವ ಸಾಧ್ಯತೆ ಉಂಟು. ಹಾಗಿರುವಾಗ ಹುಲ್ಲಿರುವ ಹೊಲವೆಂದರೆ ಅದರಲ್ಲೂ ಗರಿಕೆ ಹುಲ್ಲಿರುವ ಹೊಲವೆಂದರೆ ತೀರೇ ಹೋಯಿತು! ಏಕೆಂದರೆ ಗರಿಕೆ ಬೇರು ಚಾಪೆಯಂತೆ ಹೆಣೆದುಕೊಂಡು ಉಳುವ ಎತ್ತುಗಳ ತಾಕತ್ತಿಗೆ ಸವಾಲನ್ನು ಹಾಕುತ್ತದೆ. ಅಂಥದನ್ನು ಇನ್ನೂ ಹೆಗಲು ಕೂಡಿರದ ಹೋರಿ ಕಟ್ಟಿಕೊಂಡು ಉಳಲು ಸಾಧ್ಯವಿಲ್ಲ. ಎಳೆಯಲಾರದೆ ಗಳಿಗೆಗೊಮ್ಮೆ ಕಣ್ಣಿ ಹಾಕಿಕೊಳ್ಳುತ್ತದೆ. ಇಲ್ಲವೇ ರೇಗಿ ಹೊಡೆದಾಗ ನೇಗಿಲನ್ನು ನೆಲಕ್ಕೆ ಅದುಮುವ ಮುಂಚೆಯೇ ಬೆದರಿ ಎತ್ತೆತ್ತಲೋ ಎಳೆದುಕೊಂಡು ನುಗ್ಗುತ್ತವೆ. ಅದನ್ನು ಉಳಲು ಹೆಗಲು ಕೂತಿರುವ ಪಳಗಿದ ಎತ್ತುಗಳೇ ಸರಿ ಹೋರಿಗಳಲ್ಲ ಎಂಬ ಭಾವ ಮೊದಲನೆಯ ಕೋರಿ ಕಟ್ಕೋಂಡು ಎಂಬ ಭಾವಕ್ಕೆ ಪೂರಕವಾಗುತ್ತದೆ.

ಐಲು ಮುಂಡೆಗೆ ಅರಿಶಿಣ ಇಕ್ಕಿದ್ದೆ

ಮೇಳದೋನು ಬಂದು ಮೇಲ್ಬಿದ್ದ

'ಅರಿಸಿನ ಇಕ್ಕು' ಎಂಬ ನುಡಿಗುಟ್ಟಿಗೆ ಮದುವೆ ಮಾಡು ಎಂದರ್ಥ. 'ಅರಿಶಿಣದ ಕೂಳಿಗೆ ಹೋಗಿ ವರುಷದ ಕೂಳು ಕಳಕೊಂಡ' ಎಂಬ ಗಾದೆಯಲ್ಲಿ ಬರುವ 'ಅರಿಶಿಣದ ಕೂಳಿಗೆ' ಎಂದರೆ 'ಮದುವೆಯ ಅನ್ನಕ್ಕೆ' ಎಂದರ್ಥ. ಅರಿಶಿಣದ ಮೈಯವರು ಹುಣಸೇ ಮರದ ಕೆಳಗೆ ಹೋಗಬಾರದು ಎಂಬ ನಂಬಿಕೆಯಲ್ಲಿ ಬರುವ ಅರಿಶಿಣದ ಮೈಯವರು ಎಂದರೆ ಮದುವೆಯಾದ ಮದುವಣಿಗ ಮತ್ತು ಮದುವಣಗಿತ್ತಿಯರು ಎಂದರ್ಥ. ಏಕೆಂದರೆ ಮದುವೆಯಲ್ಲಿ ಹೆಣ್ಣು ಗಂಡುಗಳ ಮೈಗೆ ಅರಿಶಿಣ ಹಚ್ಚುವ

ಶಾಸ್ತ್ರವೇ ಒಂದುಂಟು. ಆದ್ದರಿಂದ ಐಲಿಗೆ (ಹುಚ್ಚಿಗೆ ಅಥವಾ ಎಳಸು ಬುದ್ಧಿಯವಳಿಗೆ) ಮದುವೆ ಮಾಡಿ, ಹೆಣ್ಣು ಗಂಡುಗಳ ಮೆರವಣಿಗೆ ಊರ ಬೀದಿಗಳಲ್ಲಿ ಸಾಗಿ ಬರುವಾಗ, ನೂಕು ನುಗ್ಗಲಿನಲ್ಲಿ ತಳ್ಳಾಡಿ ಬಿದ್ದ ಎನ್ನುವಂತೆ ಮೇಳದೋನು ಆ ಐಲು ಮುಂಡೆಯ ಮೇಲೆ ಬಿದ್ದನಂತೆ! ಇದು ಗಾದೆಯ ಹಿನ್ನಲೆ. ಮೇಳದೋನು ಎಂದರೆ ಓಲಗದವನು. ಓಲಗವಿಲ್ಲದೆ ಮದುವೆ ಇಲ್ಲ. ಆದ್ದರಿಂದ ಓಲಗ ಊದುವ ಮೇಳದೋನು ಮದುವೆಗೆ ಅನಿವಾರ್ಯ. ಇನ್ನು ಗಾದೆಯ ಅರ್ಥ ಇದು 'ಸಶಕ್ತರು ಮತ್ತು ಬುದ್ಧಿವಂತರು ಎಂದರೆ ಎಂಥ ಘಟಾನುಘಟಿಗಳಿಗೂ ಭಯ; ಅಶಕ್ತರು ಮತ್ತು ಬುದ್ಧಿಹೀನರು ಎಂದರೆ ಎಂಥ ಪುಟಗೋಸಿಗಳಿಗೂ ಸದರ' ಎಂಬ ಸತ್ಯವನ್ನು ಸೂಚಿಸುವುದು.

ಕೊಟ್ಟು ಕೆಟ್ಟೋರಿಲ್ಲ

ತಿಂದು ಬದುಕಿದೋರಿಲ್ಲ

ಈ ಗಾದೆಯು ದಾನ ಮಾಡುವುದರ ಮಹತ್ವವನ್ನು ತಿಳಿಸುತ್ತದೆ. ಇನ್ನೊಬ್ಬರಿಗೆ ತಮ್ಮಲ್ಲಿರುವುದನ್ನು ಕೊಟ್ಟು (ದಾನ ಮಾಡಿ, ಸಹಾಯ ಮಾಡಿ) ಜೀವಿಸುವವರು ಪೂರ್ಣ ಕೆಟ್ಟುಹೋಗುತ್ತಾರೆ ಅಥವಾ ಕೆಟ್ಟು ನೆಲ ಕಚ್ಚುತ್ತಾರೆ ಎಂಬುದು ಸುಳ್ಳು ಎಂಬ ಮೊದಲನೆಯ ಸಾಲಿನ ಭಾವಕ್ಕೆ ತಮ್ಮಲ್ಲಿರುವುದನ್ನು ಇನ್ನೊಬ್ಬರಿಗೆ ಕಿಂಚಿತ್ತೂ ಕೊಡದೆ, ಸಾಧ್ಯವಾದರೆ ಅನ್ಯರದನ್ನೂ ಘನ್ನಘಾತುಕತನದಿಂದ ಕಿತ್ತುಕೊಂಡು ತಿಂದು ತೇಗುವವರು ಪೂರ್ಣ ಬದುಕಿ (ಶ್ರೀಮಂತಿಕೆ ಪಡೆದು) ಮನೆಯ ಮೇಲೆ ಬಂಗಾರದ ಕಳಸ ಇಡುತ್ತಾರೆ ಎಂಬುದೂ ಸುಳ್ಳು ಎಂಬ ಎರಡನೆಯ ಸಾಲಿನ ಭಾವ ಕುಮ್ಮಕ್ಕು ಕೊಟ್ಟು ಗಾದೆಯ ಅಂತರಾರ್ಥ ಹುರಿಗೊಳ್ಳುವಂತೆ ಮಾಡುತ್ತದೆ. ಅಂದರೆ ಕರ್ಣನ ಕೊಡುಗೈಗೂ ಭಸ್ಮಾಸುರನ ಇಡುಗೈಗೂ ಇರುವ ಅಂತರವನ್ನು ಪರಿಣಾಮ ಫಲವನ್ನೂ ಗಾದೆ ಸೂಚಿಸುತ್ತದೆ. ಇದಕ್ಕೆ ಸಂವಾದಿಯಾದ ಗಾದೆಯೆಂದರೆ–

ನಾವೊಬ್ಬರಿಗೆ ಆದ್ರೆ ನಮಗೂ ಒಬ್ರು ಆಗ್ತಾರೆ

ಸಹಾಯ ಗುಣದಿಂದ ದೊರಕುವ ಲಾಭ ಈ ಗಾದೆಯು ಮುಖಾಂತರ ತಿಳಿಯುತ್ತದೆ. ಅಂದರೆ ನಾವು ನಮ್ಮಲ್ಲಿರುವ ಸಂಪತ್ತಿನಿಂದಾಗಲಿ, ಬೇರೆ ಯಾವುದೇ ರೀತಿಯಿಂದಲಾದರೂ ಬೇರೆ ಯಾರಾದರು ಒಬ್ಬರಿಗೆ ಸಹಾಯ ಮಾಡಿದರೆ. ಮುಂದೆ ನಮ್ಮ ಆಪತ್ತಿನ ಕಾಲದಲ್ಲಿ ನಮಗೂ ಯಾರಾದರೊಬ್ಬರು ಸಹಾಯ ಮಾಡಿತ್ತಾರೆ. ನಾವು ಮೊದಲು ಜನ ಸಂಪಾದಿಸಬೇಕು. ಅನಂತರ ಹಣ. ಹಣವೇ ಎಲ್ಲ ಅಲ್ಲ. ಪ್ರೀತಿ, ಸ್ನೇಹ, ಸೌಹಾರ್ದ, ದಯೆ, ಸಹಾಯ ಇವೇ ಮುಂತಾದವು ಮನುಷ್ಯನಿಗೆ ಮುಖ್ಯ ಎಂಬುದನ್ನು ಈ ಗಾದೆಯು ತಿಳಿಸುತ್ತದೆ.

ಅವ್ವನಿಗೆ ಹೊಟ್ಟೆ ಕಡೆ ಗ್ಯಾನ

ಹೆಂಡತಿಗೆ ಮೊಟ್ಟೆ ಕಡೆ ಗ್ಯಾನ

ಈ ಗಾದೆಯು ತಾಯಿ ಮತ್ತು ಹೆಂಡತಿಯರ ನಡುವಿನ ಅಂತರವನ್ನು ಅವರ ಮನೋಧರ್ಮವನ್ನು ತಿಳಿಸುತ್ತದೆ. ಇಲ್ಲಿ ಮೊಟ್ಟೆ ಎಂದರೆ 'ಗಂಟು' ಎಂದರ್ಥ. ವಲ್ಲಿಯಲ್ಲಿ ಅಥವಾ ಪಂಚೆಯ ಒಂದು ಮೂಲೆ ಅಥವಾ ತುದಿಯಲ್ಲಿ ಆಹಾರ ವಸ್ತುಗಳನ್ನು ಕಟ್ಟಿದರೆ ಉದ್ಭವವಾಗುತ್ತದೆ ಮೊಟ್ಟೆ; ಅಥವಾ ಬಾಹ್ಯ ಪದಾರ್ಥಗಳನ್ನು ವಲ್ಲಿಯ ಅಥವಾ ಪಂಚೆಯ ತುಂಡಿನ ಮದ್ಯೆ ಇಟ್ಟು ಎರಡು ತುದಿಗಳನ್ನು ಸೇರಿಸಿ ಹಿಡಿದುಕೊಂಡು ಅಥವಾ ಹೆಗಲ ಮೇಲೆ ಹಾಕಿಕೊಂಡು ಬರುವುದಕ್ಕೆ ಮೊಟ್ಟೆ ಎಂದು ಕರೆಯುತ್ತಾರೆ. ಮೊಟ್ಟೆಯ ಮೂಲಾರ್ಥವಾದ ಗಂಟಿಗೆ ಹಣ ಎಂಬ ಅರ್ಥವೂ ಇದೆ.

ಪ್ರಸ್ತುತ ಗಾದೆಯಲ್ಲಿ ತಾಯಿ ಮತ್ತು ಹೆಂಡತಿಗೆ ಇರುವ ವ್ಯತ್ಯಾಸವನ್ನು ತಿಳಿಸಲು ಹೊಟ್ಟೆ ಮತ್ತು ಮೊಟ್ಟೆ ರೂಪಕಗಳು ಪ್ರಯೋಗವಾಗಿವೆ. ಹೊರಗಿನಿಂದ ಬಂದ ಮಗ ಉಂಡಿದ್ದಾನೋ ಹಸಿದಿದ್ದಾನೋ ಎಂದು ಆತಂಕ ಪಡುವುದು ಹೆತ್ತಮ್ಮನ ಸ್ವಾಭಾವಿಕ ಗುಣ. ತಾಯಿ ಮಗನ ಬಗ್ಗೆ ಎಷ್ಟು ನಿಗಾ ವಹಿಸುತ್ತಾಳೆ ಎಂಬುದಕ್ಕೆ ವಾಲ್ಮೀಕಿ ರಾಮಾಯಣದ ಒಂದು ಪುಟ್ಟ ಸ್ವಾರಸ್ಯಕರ ಪ್ರಸಂಗವನ್ನು ನೆನೆಯಬಹುದು. ರಾಮ ಯುವರಾಜನಾಗುವನೆಂಬುದು ತೀರ್ಮಾನವಾಗಿದೆ. ಆದರೆ ಅವನಿಗೆ ವನವಾಸ ಪ್ರಾಪ್ತವಾಗಿದೆ. ಇದನ್ನು ತಿಳಿಸಿ ಆಶೀರ್ವಾದ ಪಡೆದು ಕಾಡಿಗೆ ಹೋಗಲು ತಾಯಿ ಕೌಸಲ್ಯಯ ಬಳಿ ಬರುತ್ತಾನೆ. ಆಕೆ ಏನಾಯಿತು ಎಂದು ಕೇಳದೆ ಮಗನಿಗೆ ಊಟ ಬಡಿಸುತ್ತಾಳೆ.

"ದತ್ತಮಾಸನಮಾಲಭ್ಯ ಭೋಜನೇನ ಆಮಂತ್ರಿತಃ"

ತಾಯಿಯ ಹೃದಯ ಹೇಗೆ ತುಡಿಯುತ್ತದೆಂಬ ಸತ್ಯವನ್ನು ವಾಲ್ಮೀಕಿ ಈ ಘಟನೆಯಿಂದ ಸುಂದರವಾಗಿ ಅಭಿವ್ಯಕ್ತಗೊಳಿಸಿದ್ದಾನೆ. ಅದೇ ರೀತಿ ಈ ಗಾದೆಯಲ್ಲಿ ಹೆಂಡತಿಯ ಗಮನ ಮೊಟ್ಟೆಯ ಕಡೆ ಹರಿದರೆ. ತಾಯಿಯ ಗಮನ ಮಗನ ಹೊಟ್ಟೆಯ ಕಡೆ ಹರಿಯುತ್ತದೆ. ಇದರಿಂದಾಗಿ ತಾಯಿ ಮತ್ತು ಹೆಂಡತಿಯ ಭಿನ್ನ ಸ್ವಭಾವಗಳು ಸುಂದರವಾಗಿ ಚಿತ್ರಿತವಾಗಿವೆ.

ಹೆತ್ತೋರಿಗೆ ಮಕ್ಕಳು ಭಾರವ?

ಕುಂಬಳ ಬಳ್ಳಿಗೆ ಕಾಯಿ ಭಾರವ?

ಹೆತ್ತ ತಂದೆ-ತಾಯಿಯರಿಗೆ ಎಂದೂ ತಮ್ಮ ಮಕ್ಕಳು ಭಾರವಲ್ಲ ಎಂಬುದನ್ನು ಈ ಗಾದೆಯು ತಿಳಿಸುತ್ತದೆ. 'ಹುಟ್ಟಿಸಿದ ಶಿವ ಮೇವು ಕೊಡಲ್ವ' ಎಂಬ ಭಾವನೆಯನ್ನು ಹೊಂದಿದವರು ಇವರು.

ಆದುದರಿಂದ ತಮ್ಮ ಮಕ್ಕಳು ತಮಗೆ ಭಾರವಾಗಿ ಪರಿಣಮಿಸಿದರು ಎಂದು ಎಂದಿಗೂ ಭಾವಿಸುವುದಿಲ್ಲ. ತಮ್ಮ ಅನಂತರ ಮಕ್ಕಳೇ ತಮ್ಮ ವಂಶವನ್ನು ಲಾಲನೆ ಪಾಲನೆ ಮಾಡಿ ಮುಂದುವರೆಸುವವರು ಅಲ್ಲದೆ ಬೆಳವಣಿಗೆಗೆ ನೆರವಾಗಬೇಕಾದುದು ತಮ್ಮ ಕರ್ತವ್ಯ ಎಂದು ಭಾವಿಸಿರುತ್ತಾರೆ. ಅದಕ್ಕಾಗಿ ಕೂಲಿಯಾದರೂ ಮಾಡಿ ಸಲಹುತ್ತಾರೆ. ಅದೇ ರೀತಿ ಕುಂಬಳ ಬಳ್ಳಿಗೆ ಅದರ ಕಾಯಿ ಎಂದೂ ಭಾರ ಎನಿಸುವುದಿಲ್ಲ. ಬಳ್ಳಿ ಎಂದರೆ ಹಂಬು ಕಾಯಿಗೆ ಜನನಿ. ಹಂಬಿಗಿಂತ ಕಾಯೇ ಭಾರವಾಗಿದ್ದರೂ ಬಳ್ಳಿಗೆ ಅದು ಭಾರ ಎನಿಸುವುದಿಲ್ಲ. ಹಾಗೆಯೇ ಹೆತ್ತವರಿಗೆ ಮಕ್ಕಳು ಭಾರ ಎನಿಸುವುದಿಲ್ಲ ಎಂಬುದನ್ನು ಗಾದೆಯು ತಿಳಿಸುತ್ತದೆ.

ಗಂಡ ಸತ್ತವಳಿಗೆ ಗಂಧ ಕುಂಕುಮ ಯಾಕೆ

ಗಂಡ ಇಲ್ಲದ ಮೇಲೆ ಮುಂಡೆ ಬಾಳು

ಮೇಲಿನ ಎರಡೂ ಗಾದೆಗಳು ವಿಧವೆಯ ಜೀವನ ವಿಧಾನವನ್ನು ಕುರಿತದ್ದು. ಮದುವೆ ಆದ ಹೆಣ್ಣಿಗೆ ಗಂಡನೇ ಸರ್ವಸ್ವ, ಆತನೇ ಅವಳ ಬಾಳಿನ ಆಧಾರ. ಆತನ ದೆಸೆಯಿಂದಲೇ ಐದು ಮುತ್ತುಗಳನ್ನು ಹೊಂದಿ ಆಕೆ ಮುತ್ತೈದೆಯಾಗಿರುತ್ತಾಳೆ. ಆಕೆಯನ್ನು 'ಸುಮಂಗಲಿ' ಎಂದು ಕರೆಯುತ್ತಾರೆ. ಆಕೆಯನ್ನು ಶುಭ ಸಮಾರಂಭಗಳಿಗೆ ಆಹ್ವಾನಿಸಿ ಮಡಿಲು ತುಂಬಿ ಗಂಧ, ಕುಂಕುಮ, ಬಳೆ, ರವಕೆ, ಸೀರೆ ಮುಂತಾದವನ್ನು ಕೊಟ್ಟು ಕಳುಹಿಸುತ್ತಾರೆ. ಸಮಾಜದಲ್ಲಿ ಒಂದು ಉತ್ತಮವಾದ ಸ್ಥಾನ ಇರುತ್ತದೆ. ಆದರೆ ದುರಾದೃಷ್ಟವಶಾತ್ ಆಕೆಯ ಗಂಡ ಸತ್ತು ಹೋದರೆ ಅವಳ ಮುಂದಿನ ಜೀವನವನ್ನು ವಿಧವೆಯಾಗಿ ಕಳೆಯಬೇಕು. ನಮ್ಮ ಯಾವ ಧರ್ಮದಲ್ಲೂ ಹೆಣ್ಣಿಗೆ ಪುನರ್ವಿವಾಹದ ಅವಕಾಶವನ್ನು ನೀಡಿಲ್ಲ. ಅದಿರುವುದು ಪುರುಷನಿಗೆ ಮಾತ್ರ. ಇದು ಪುರುಷ ಪ್ರಧಾನ ಸಮಾಜದ ನಿಯಮ ಪಾಲಿಸಲೇಬೇಕಲ್ಲವೆ? ಆದುದರಿಂದ ವಿಧವೆಯಾದ ಆಕೆಯನ್ನು 'ಮುಂಡೆ' ಎಂದು ಕರೆಯುತ್ತಾರೆ. ಯಾವುದೇ ಶುಭಸಮಾರಂಭದ ಕಾರ್ಯಗಳಿಗೆ ಆಹ್ವಾನ ನೀಡುವುದಿಲ್ಲ. ಆಕೆಯನ್ನು ಸಮಾಜ ಬಹಳ ಕೀಳಾಗಿ ನಡೆಸಿಕೊಳ್ಳುತ್ತದೆ. ಒಳ್ಳೆಯ ಕಾರ್ಯಗಳಿಗೆ ತೆರಳುವಾಗ ಆಕೆಯ ಮುಖ ನೋಡಬಾರದು. ನೋಡಿದರೆ ಅನಿಷ್ಟ ಎಂಬ ಭಾವನೆ. ಅವಳಿಗೆ ಪ್ರಕೃತಿ ದತ್ತವಾಗಿ, ಹುಟ್ಟಿನಿಂದ ಬಂದ ಕುಂಕುಮ, ಬಳೆ, ಕಾಲುಂಗುರ, ಇವನ್ನು ಧರಿಸುವಂತಿಲ್ಲ. ತಾಲಿಯನ್ನೂ ತೆಗೆಯುತ್ತಾರೆ. ಒಟ್ಟಾರೆಯಾಗಿ ಮುತ್ತೈದೆಯಾಗಿದ್ದವಳು ಮುಂಡೆಯಾಗುತ್ತಾಳೆ. ಇದು ಸಮಾಜದ ನಿಯಮ.

ಸಮಾಜದಲ್ಲಿ ಬಡವ ಮತ್ತು ಬಲ್ಲಿದರ ನಡುವಿನ ಅಂತರ, ಅವರನ್ನು ಸಮಾಜ ನಡೆಸಿಕೊಳ್ಳುವ ರೀತಿಯನ್ನು ಕೆಳಗಿನ ಗಾದೆಯಿಂದ ತಿಳಿಯಬಹುದು.

ಬಡವರು ಮಾಡಿದರೆ ವ್ಯಭಿಚಾರ

ಬಲ್ಲಿದರು ಮಾಡಿದರೆ ವ್ಯವಹಾರ

ಇಲ್ಲಿ ಮಾಡಲಾಗಿರುವುದು ಒಂದೇ ಕ್ರಿಯೆ: ಅದು ಅನಾಚಾರ. ಆದರೆ ನೋಡುವ ದೃಷ್ಟಿಗೆ ಮಾತ್ರ, ನೋಡುವ ಜನಕ್ಕೆ ತಕ್ಕಂತೆ ಅದು ಬೇರೆ ಬೇರೆಯಾಗಿ ಕಾಣುತ್ತದೆ. ಅವೆರಡೂ ದೃಷ್ಟಿಗಳ ಹಿನ್ನಲೆಯನ್ನೂ ಸಮದೃಷ್ಟಿಯಿಂದ ನೋಡುವ ಕವಿಗೆ ಮಾತ್ರ ಯಾವ ಪಕ್ಷಪಾತವೂ ಇಲ್ಲ ಬಡವ ಬಲ್ಲಿದನೆಂಬ ಮುಲಾಜಿಲ್ಲ. ಅವನು ಸಮದರ್ಶಿ. ನಿರ್ದಾಕ್ಷಿಣ್ಯ ಪರನಾದ ಕಟುವಿಮರ್ಶಕ, ಎಂತಲೇ ಅನ್ನುತ್ತಾನೆ. ಮಾಡೋದನಾಚಾರ ಮನೆ ಮುಂದೆ ಬೃಂದಾವನ' ಎಂಬುದಾಗಿ ಬಡವರು ಮಾಡಿದರೆ ಜನ ವ್ಯಭಿಚಾರವೆಂದು ದೂರು ಮಾಡುತ್ತಾರೆ. ದಂಡ, ದೋಷ ಹೊರಿಸುತ್ತಾರೆ. ಏಕೆಂದರೆ ಬಡವ ಏನಂದರೂ ತಡೆದುಕೊಳ್ಳುತ್ತಾನೆ. ಏನು ಮಾಡಿದರೂ ತಾಳ್ಮೆಯಿಂದ ಅನುಭವಿಸುತ್ತಾನೆ.

'ಬಗ್ಗಿದೋನ ಬೆನ್ನಿಗೆ ಬಂಡೆ ಹೇರಿದರು' ಎಂಬ ಗಾದೆ ಇಂಥ ಬಡವನನ್ನು ಕಂಡೇ ಹುಟ್ಟಿದ್ದು. ಅವನಿಗೆ ಹಣದ ಬಲವಿಲ್ಲ. ಆದ್ದರಿಂದ ಆತನನ್ನು ಕುರಿತು ಆಡಿಕೊಳ್ಳುವುದು ಸುಲಭ ನಿರಪಾಯಕರ 'ಬಡವರ ಕೋಪ ದವಡೆಗೆ ಮೂಲ' ಎಂಬುದನ್ನು ಬಡವನೂ ಅನುಭವಿಸಿ ಬಲ್ಲ. 'ದೊಡ್ಡೋರು ಬಂದ್ರೆ ಒದರಿ ಹಾಸ್ತೀವಿ. ಬಡವರು ಬಂದ್ರೆ ಬಾಗಿಲಲ್ಲಿ ನಿಲ್ಲಿಸ್ತೀವಿ' ಎಂಬಂತೆ. ಹೀಗಾಗಿ ಜನ ಆತ ಮಾಡಿದೊಂದು ಸಣ್ಣ ತಪ್ಪನ್ನು ದೊಡ್ಡದು ಮಾಡಿ, ಇಲ್ಲದ್ದನ್ನು ಹುಟ್ಟಿಸಿ ಆಡುತ್ತಾರೆ. ನೋಡುವವರೂ ಕೇಳುವವರೂ ಕೂಡ ಹಾಗೆಯೇ ಇರಬೇಕೆಂದು ನಂಬುತ್ತಾರೆ. ಕಾರಣ 'ಹೂಸಿದವಳು ಯಾರು ಅಂದ್ರೆ ಮಾಸಿದ ಸೀರ್‍ಯೋಳಂದ್ರು' ಎಂಬ ನಾಣ್ಣುಡಿಯೇ ಸಾಕ್ಷಿ. ಈಗ ಬಡವನಿಗೆ ಉಳಿದದ್ದು ಒಂದೇ ದಾರಿ; ಬಂದದ್ದನ್ನು ಭರಿಸುವುದು. ಒಳಗೊಳಗೆ ಕುದಿದುಕೊಂಡು ತನ್ನ ನೋವು ಅಪಮಾನಗಳನ್ನೆಲ್ಲ ಮೌನವಾಗಿ ನುಂಗಿಕೊಳ್ಳುವುದು. ಅದಕ್ಕೆ ಒಂದು ಗಾದೆ ಸಿದ್ಧವಾಗಿದೆ 'ಬಡವಾ ನೀನು ಮಡಗಿದಂಗಿರು' ಮಡಗಿರಿಸಿದ ವಸ್ತುವಿನಂತೆ ಸದ್ದಿಲ್ಲದೆ ಬಿದ್ದಿರಬೇಕಂತೆ.

ಬಲ್ಲಿದನ ಮಾತು ಬೇರೆ. ಆತ ಉದ್ದೇಶ ಪೂರ್ವಕವಾಗಿ ವ್ಯಭಿಚಾರವನ್ನು ಮಾಡಿದರೂ ಕೂಡ ಆತನ ಹಣ ಬಲ, ಜನ ಬೆಂಬಲ, ಸಮಾಜದಲ್ಲಿನ ಸ್ಥಾನಮಾನಗಳು ಅದನ್ನು ಕಂಡರೂ ಕಾಣದಂತೆ ಮುಚ್ಚಿಬಿಡುತ್ತವೆ. ಲೆಕ್ಕಕ್ಕೆ ಬಾರದಂತೆ ಮಾಡುತ್ತವೆ. ಆತ ಮಾಡಿದ್ದೆಲ್ಲ ಕೇವಲ ಲೌಕಿಕ ವ್ಯವಹಾರದ ದೃಷ್ಠಿಯಿಂದ, ಅನಿವಾರ್ಯತೆಯ ಕಾರಣದಿಂದಾಗಿ. ಅದು ಒಂದು ನಿರ್ಲಕ್ಷ್ಯ ವಿಚಾರ ಎಂಬುದಾಗಿ ಸಮಾಜ ತೇಲಿಸುತ್ತದೆ. ಹಣವಂತ ಮಾಡಿದ ಹಾದರವನ್ನು ಲೋಕ ಕಂಡು ಕಣ್ಮುಚ್ಚುತ್ತದೆ. ಕವಡು

ನುಡಿಯುತ್ತದೆ. ಬಡವ ಮಾಡಿದ ಅಲ್ಪ ತಪ್ಪನ್ನೂ ಲೋಕ ಸಹಜವಾದ ವ್ಯವಹಾರವನ್ನೂ ಸಂಶಯದ ದೃಷ್ಟಿಯಿಂದ ನೋಡಿ ಕೇಡು ನುಡಿಯಾಡುತ್ತದೆ.

ದೊಡ್ಡೋರು ಗತಿ ಇಲ್ಲದೆ ಗಂಜಿ ಕುಡಿದರೂ

ಪಥ್ಯ ಅಂತಾರೆ

ಬಡವರು ಪಥ್ಯಕೆ ಗಂಜಿ ಕುಡಿದರೂ

ಗತಿಯಿಲ್ದೆ ಅಂತಾರೆ

ಎಂಬ ಗಾದೆಯಂತೆ ಲೋಕ ಸ್ವಭಾವವೇ ಹೀಗೆ. 'ಆರು ದೋಸೆ ಕೊಟ್ರೆ ಅತ್ತೆ ಕಡೆ. ಮೂರು ದೋಸೆ ಕೊಟ್ರೆ ಸೊಸೇ ಕಡೆ' ಎಂಬಂತೆ ಅದು ಯಾವಾಗಲೂ ಉಳ್ಳವರ ಪಕ್ಷಪಾತಿ. ಉಳ್ಳವರನ್ನು ಕಂಡರೂ ಕಾಣದಂತಿರುತ್ತದೆ. ಬಡವರ ಸಣ್ಣ ಹುಳುಕು ಕಂಡರೆ ಸಾಕು ಡಂಗೂರ ಸಾರಿ, ಅಂಥವರ ಮುಖಕ್ಕೆ ಮಸಿ ಬಳಿದು ಬೀಗುತ್ತದೆ.

ನಾಯಿ ಮುಟ್ಟಿದ ಮಡಕೇನ

ನಾಯಿ ಕೊಳ್ಳಿಗೇ ಕಟ್ಟು

ಈ ಗಾದೆಯಲ್ಲಿ ಮುಖ್ಯವಾಗಿ ಎರಡು ರೀತಿಯ ಅರ್ಥಗಳಿರುವುದು ಕಂಡುಬರುತ್ತದೆ. ಒಂದು ವಾಚ್ಯಾರ್ಥ, ಮತ್ತೊಂದು ಅದರಲ್ಲಿ ಅಡಗಿರುವ ವಿಶೇಷಾರ್ಥ ಅಂದರೆ ಸೂಚ್ಯಾರ್ಥ. ಎರಡು ಅರ್ಥಗಳೂ ತಮ್ಮದೇ ಆದ ವಿಶಿಷ್ಟತೆಯನ್ನು ಹೊಂದಿವೆ. ಮೊದಲನೆಯದಾಗಿ ನಾಯಿ ಎಂಬುದು ಕೀಳು ಪ್ರಾಣಿ, ಆದುದರಿಂದ ಅಂತಹ ಕೀಳು ಪ್ರಾಣಿ ಮುಟ್ಟಿದಂತಹ ಮಡಕೆಯನ್ನು ಅದರ ಕೊರಳಿಗೇ ಕಟ್ಟಿ ಅದರ ವಶಕ್ಕೆ ಕೊಟ್ಟು ಬಿಡುವುದು. ಮಡಕೆಯನ್ನು ಆಹಾರ ಬೇಯಿಸಲು ಬಳಸುತ್ತಾರೆ. ಆದ ಕಾರಣ ನಾಯಿ ಮುಟ್ಟಿದ್ದರಿಂದ ಅದನ್ನು ಮತ್ತೆ ಪುನಃ ಉಪಯೋಗಿಸಬಾರದು ಎಂದು ಬೀಸಾಡುತ್ತಾರೆ. ಇದು ಗಾದೆಯ ವಾಚಾರ್ಥ. ಆದರೆ ಇದರಲ್ಲಿರುವ ಸೂಚ್ಯಾರ್ಥವೇ ಬೇರೆ ಅಂದರೆ ಯಾವುದಾದರೂ ಒಂದು ಗಂಡು ಯಾವುದಾದರು ಹೆಣ್ಣನ್ನು ಹಾಳು ಮಾಡಿದರೆ. ಅಂಥ ಹುಡುಗಿಯನ್ನು ಬೇರೆಯವರು ವಿವಾಹವಾಗಲು ಸಿದ್ಧರಿರುವುದಿಲ್ಲ. ಆದುದರಿಂದ ಆ ಹುಡುಗಿಯನ್ನು ಆ ಹುಡುಗನಿಗೇ ಮದುವೆ ಮಾಡಿ ಎಂದು ತಿಳಿಸುವುದು ಅದರ ಅಂತರಾರ್ಥವಾಗಿದೆ. ಇಲ್ಲಿ ಗಂಡನ್ನು ನಾಯಿಗೆ ಮತ್ತು ಹೆಣ್ಣನ್ನು ಮಡಕೆಗೆ ಹೋಲಿಸಿರುವುದು ತುಂಬಾ ಅರ್ಥವತ್ತಾಗಿದೆ.

ಫಲ ಕೊಟ್ಟು ಪಾಪ ಕಳಿ

ಜನ ಸಾಮಾನ್ಯರಲ್ಲಿ ಇರುವ ನಂಬಿಕೆಯೊಂದನ್ನು ಈ ಗಾದೆಯು ತಿಳಿಸುತ್ತದೆ. ಫಲ ಎಂದರೆ ಹಣ್ಣು. ಹಣ್ಣು ತುಂಬಾ ಶ್ರೇಷ್ಟವಾದುದು. ಫಲದಾನ ಎಲ್ಲದಕ್ಕಿಂತಲೂ ಮುಖ್ಯ ಆದುದರಿಂದ ಫಲವನ್ನು ದಾನವಾಗಿ ನೀಡಿದರೆ ಪಾಪ ಕಳೆಯುತ್ತದೆ ಎಂಬ ನಂಬಿಕೆ. ಆದರೆ ಇದೊಂದು ನಂಬಿಕೆ ಯಾವ ರೀತಿ ಬಂದಿತು ಎಂಬುದು ಊಹಿಸುವುದು ಕಷ್ಟ. ಬ್ರಾಹ್ಮಣರ ದೆಸೆಯಿಂದ ಬಂದಿರಬಹುದು. ಸಾಮಾನ್ಯವಾಗಿ ಬ್ರಾಹ್ಮಣರು ಮಾಂಸಾಹಾರ ಸೇವನೆ ಮಾಡುವುದಿಲ್ಲ. ಜೊತೆಗೆ ಅವರು ಶೂದ್ರರ ಮನೆಯಲ್ಲಿ ಊಟ ಮಾಡುವುದಿಲ್ಲ. ಮಡಿ, ಮೈಲಿಗೆ ಅವರಿಗೆ ಮುಖ್ಯ. ಆದುದರಿಂದ ಅವರು ಶೂದ್ರರ ಮನೆಯಲ್ಲಿ ಊಟ ಮಾಡದೆ ಹಣ್ಣನ್ನು ಸೇವಿಸುತ್ತಾರೆ. ಈ ಕಾರಣದಿಂದಲೂ ಶೂದ್ರರೂ ಬ್ರಾಹ್ಮಣರಿಗೆ ಹಣ್ಣನು ನೀಡುತ್ತಾರೆ. ಬ್ರಾಹ್ಮಣರಿಗೆ ದಾನ ಮಾಡಿದರೆ ಪುಣ್ಯ ಬರುತ್ತದೆ ಎಂಬುದು ನಂಬಿಕೆ. ಆ ಕಾರಣದಿಂದ ಆ ಗಾದೆ ಮೂಢಿರಬಹುದು.

ಬಾಳೆಗೊಂದು ಗೊನೆ

ಬಾಳೋಳಿಗೊಂದು ಮನೆ

ಈ ಗಾದೆಯು ಹೆಣ್ಣು ಯಾವ ರೀತಿ ಇರಬೇಕು ಎಂಬುದನ್ನು ತಿಳಿಸುತ್ತದೆ. ಮದುವೆಯಾದ ಹೆಣ್ಣು ಯಾವುದೇ ತೊಂದರೆ ಬಂದರೂ ಗಂಡನನ್ನು ತೊರೆಯಬಾರದು ಎಂಬುದಾಗಿ ತಿಳಿಸುತ್ತದೆ. ಆ ರೀತಿ ಏನಾದರು ಬಿಟ್ಟು ಬಂದು ಬೇರೆಯಾದರೆ ಬಾಳಲಾರದೆ ಬಂದವಳು ಎಂಬ ಕುಹಕವಾಡುತ್ತಾರೆ. ಅಲ್ಲದೆ ಸಮಾಜದಲ್ಲಿ ಆಕೆಗೆ ಅಗೌರವ, ಅವಮಾನ ಆದುದರಿಂದ ಆಕೆ ಮದುವೆಯಾದ ಮೇಲೆ ಅದೇ ಮನೆ ಆಕೆಗೆ ಎಲ್ಲ. ಆದುದರಿಂದ ಬಾಳುತ್ತೇನೆ ಎಂಬುದವಳಿಗೆ ಹೇಗೆ ಒಂದೇ ಮನೆಯೋ ಹಾಗೆಯೇ ಬಾಳೇ ಗಿಡಕ್ಕೆ ಒಂದೇ ಗೊನೆ ಎಂಬುದನ್ನು ಇದು ತಿಳಿಸುತ್ತದೆ.

ಮಟ್ಟ ಮಂಗ್ಳಾರ ಮಗಳನ್ನು ಕಳುಹಿಸಬಾರದು

ಸುಟ್ಟ ಸುಕ್ರಾರ ಸೊಸೆ ಕಳಿಸಬಾರದು

ಈ ಗಾದೆಯು ಸಮಾಜದಲ್ಲಿ ಆಚರಣೆಯಲ್ಲಿರುವ ಸಂಪ್ರದಾಯ ಮತ್ತು ನಂಬಿಕೆಯನ್ನು ಧ್ವನಿಸುತ್ತದೆ. ಸಾಮಾನ್ಯವಾಗಿ ಸಮಾಜದಲ್ಲಿ ಮಂಗಳವಾರ ಮಗಳನ್ನು ಮತ್ತು ಶುಕ್ರವಾರ ಸೊಸೆಯನ್ನು ಕಳುಹಿಸುವುದಿಲ್ಲ. ಇದು ಸಂಪ್ರದಾಯ. ಮಂಗಳವಾರ ಎಂಬುದು ಅಮಂಗಳವಾರವಾಗಿದೆ. ಅಂದು ಯಾವುದೇ ಶುಭಕಾರ್ಯವನ್ನು ಮಾಡುವುದಿಲ್ಲ. ಆದುದರಿಂದ ಗಂಡನ ಮನೆಗೆ ಹೋಗಬೇಕಾದ

ಹೆಣ್ಣನ್ನು ಅಂದು ಕಳುಹಿಸಿದರೆ ಅಮಂಗಳ ಎಂಬ ಕಾರಣದಿಂದ ಕಳುಹಿಸುವುದಿಲ್ಲ. ಶುಕ್ರವಾರವನ್ನು ಲಕ್ಷ್ಮಿಯವಾರ ಎಂದು ಪೂಜಿಸುತ್ತಾರೆ. ಮನೆಯ ಸೊಸೆಯನ್ನು ಲಕ್ಷ್ಮಿ ಎಂದು ಭಾವಿಸಿರುವುದರಿಂದ ಶುಕ್ರವಾರ ಸೊಸೆಯನ್ನು ತಂದೆಯ ಮನೆಗೆ ಕಳುಹಿಸುವುದಿಲ್ಲ. ಕಳುಹಿಸಿದರೆ ಮನೆಯ ಲಕ್ಷ್ಮಿ ಸೊಸೆಯೊಂದಿಗೆ ಹೊರಹೋಗುತ್ತಾಳೆ ಎಂಬುದರಿಂದ ಇದು ನಂಬಿಕೆ

ಸವತಿ ಅಂದ್ರೆ ಸತ್ತ ಹೆಣ ಬಾಯ್ಬಿಡ್ತು

ಸಾವಿರ ಕೊಟ್ಟರೂ ಸವತಿ ಮನೆ ಬೇಡ

ಈ ಎರಡು ಗಾದೆಗಳು ಸವತಿಯ ಬಗ್ಗೆ ತಿಳಿಸುತ್ತವೆ. ಸವತಿ ಎಂದರೆ ಮದುವೆಯಾದ ಪುರುಷನನ್ನು ಮತ್ತೆ ಮದುವೆಯಾದ ಹೆಣ್ಣು. ಸತಿಯ ಮೇಲೊಬ್ಬಳು ಸತಿ ಸವತಿ. ಈ ಇಬ್ಬರು ಯಾವಾಗಲೂ ಹೊಂದಿಕೊಂಡು ಬಾಳಲು ಇಚ್ಚಿಸುವುದಿಲ್ಲ. ಹಿರಿಯ ಕಿರಿಯ ಎಂಬ ಭೇದ ಭಾವ ಕಂಡುಬರುತ್ತದೆ. ಆದುದರಿಂದ ಯಾವಾಗಲೂ ಇವರು ಹಾವು-ಮುಂಗುಸಿ, ಎಣ್ಣೆ-ಸೀಗೆಕಾಯಿ ರೀತಿ ಇರುತ್ತಾರೆ. ಒಬ್ಬರ ಕಂಡರೆ ಒಬ್ಬರಿಗೆ ಆಗುವುದಿಲ್ಲ. ಒಬ್ಬೊಬ್ಬರನ್ನು ನಿಗ್ರಹಿಸುವುದರಲ್ಲಿ ಇರುತ್ತಾರೆ. ಇವರಿಗೆ ಇರುವ ಆ ಕೋಪದ ತೀವ್ರತೆಯನ್ನು ಮೊದಲ ಗಾದೆ ತಿಳಿಸುತ್ತದೆ. ಒಬ್ಬರೊಬ್ಬರು ಮುಖ ನೋಡುವುದು ಇರಲಿ ಅವರ ಹೆಸರು ಕೇಳುತ್ತಿದ್ದಂತೇ ಕೋಪ ನೆತ್ತಿಗೇರಿ ಪಿತ್ತ ಅಡ್ಡಾದಿಡ್ಡಿಯಾಗುವುದನ್ನು ತಿಳಿಸುತ್ತದೆ. 'ಹಣ ಎಂದರೆ ಹೆಣ ಬಾಯಿ ಬಿಡುವಂತೆ' ಎಂಬ ಗಾದೆಯಂತೆ 'ಸವತಿ ಎಂದರೆ ಹೆಣ ಬಾಯಿ ಬಿಡುತ್ತದಂತೆ' ಎಂಬುದನ್ನು ತಿಳಿಸುತ್ತದೆ. ಎರಡನೆಯ ಗಾದೆಯು ಈ ಸವತಿಯರಲ್ಲಿ ಇರುವ ಸೇಡು, ಕೋಪ, ಪ್ರತಿಕಾರ ಮನೋಭಾವ ಇವೇ ಮುಂತಾದವುಗಳನ್ನು ತಿಳಿಸುತ್ತದೆ. ಒಬ್ಬರಿಗೊಬ್ಬರು ಹೊಂದಿಕೊಂಡು ಬಾಳುವುದೇ ಕಷ್ಟವಿರುವಾಗ ಆ ಇಬ್ಬರೂ ಒಂದೇ ಮನೆಯಲ್ಲಿ ಇರುತ್ತಾರೆಯೇ? ಕಷ್ಟ-ಸುಖಗಳನ್ನು ಹಂಚಿಕೊಂಡು ಬಾಳುತ್ತಾರೆಯೇ? ಆದುದರಿಂದ ಒಂದೇ ಮನೆಯಲ್ಲಿ ಇದ್ದರೆ ದಿನವೂ ಕುರುಕ್ಷೇತ್ರ ಯುದ್ಧ. ಇವೇ ಮುಂತಾದವುಗಳನ್ನು ಎರಡನೇ ಗಾದೆಯು ಧ್ವನಿಸುತ್ತದೆ.

ಸಾವಿರ ಸುಳ್ಳು ಹೇಳಿ ಒಂದು ಕಲ್ಯಾಣ ಮಾಡು

ಮದುವೆ ಎಂಬುದು ಸಮಾಜದಲ್ಲಿ ಮೌಲ್ಯಯುತವಾದುದು. ಮದುವೆಗೆ ತನ್ನದೇ ಆದ ವಿಶಿಷ್ಟ ಪ್ರಾಮುಖ್ಯತೆ ಇದೆ. ಆದುದರಿಂದಲೇ ಒಂದು ಬಾರಿ ಮದುವೆಯಾದರೇ ಅದರಿಂದ ಬೇರೆಯಾಗದ ರೀತಿಯಲ್ಲಿ ಸಮಾಜ ಹಲವಾರು ಕಟ್ಟುಪಾಡುಗಳನ್ನು ನಿಯಮಗಳನ್ನು, ಸಂಪ್ರದಾಯ, ನಂಬಿಕೆ ಎಂಬ ಹೆಸರಿನಿಂದ ತಡೆದಿದೆ. ಜೀವನದಲ್ಲಿ ಮದುವೆ ಆಗುವುದು ಒಂದೇ ಬಾರಿ. ಅಕಸ್ಮಾತ್ ಬೇರೆ ಮತ್ತೊಂದು ಮದುವೆ ಆಗಬೇಕಾದರೆ ಹಲವಾರು ನಿಯಮಗಳಿವೆ. ಆದರೆ ಪುರುಷನಿಗೆ ಮತ್ತೊಂದು ಮದುವೆ

ಅವಕಾಶವನ್ನು ಸುಲಭವಾಗಿ ನೀಡಿದೆ. ಸ್ತ್ರೀಗೆ ಅದು ಇಲ್ಲ. ಪುರುಷ ಹೆಂಡತಿ ಸತ್ತ ಮರುಕ್ಷಣದಲ್ಲೇ ವಿವಾಹವಾಗಬಹುದು. ಇಲ್ಲವೇ ಅದಕ್ಕೂ ಮೊದಲು ಆಗಬಹುದು. ಸ್ತ್ರೀಗೆ ಈ ರೀತಿಯ ಸ್ವಾತಂತ್ರ್ಯವನ್ನು ನೀಡಿಲ್ಲ. ಇದು ಪುರುಷ ಪ್ರಧಾನ ಸಮಾಜದ ಕೊಡುಗೆ.

ಇಂಥ ಶ್ರೇಷ್ಠ ಕಲ್ಯಾಣ (ಮದುವೆ)ವನ್ನು ಮಾಡುವಾಗ ಹಲವಾರು ತೊಂದರೆಗಳು ಬರಬಹುದು. ಅವುಗಳ ನಿವಾರಣೆಗಾಗಿ ಏನು ಮಾಡಿದರೂ ಸರಿ. ಒಳ್ಳೆಯ ಕಾರ್ಯಕ್ಕೆ ನೂರೊಂದು ವಿಘ್ನ ಎನ್ನುವ ಹಾಗೆ ಮದುವೆಗೂ ಇರುತ್ತದೆ. ಅಂಥ ಸಂದರ್ಭದಲ್ಲಿ ಸಾವಿರ ಸುಳ್ಳನ್ನಾದರೂ ಹೇಳಿ ಮದುವೆ ಮಾಡಿ ಎಂಬುದು ಈ ಗಾದೆಯ ಆಶಯ.

ಹತ್ತು ಜನ ಗಂಡಸರು ಒಟ್ಟಿಗೆ ಬಾಳ್ತಾರೆ

ಇಬ್ಬರು ಕರೀ ತಲೇರು ಒಟ್ಟಿಗೆ ಬಾಳುವುದಿಲ್ಲ

ಈ ಗಾದೆಯು ಸ್ತ್ರೀಯ ದೆಸೆಯಿಂದ ಕುಟುಂಬಗಳು ಪಾಲಾಗುತ್ತವೆ. ಎಂಬುದನ್ನು ತಿಳಿಸುತ್ತದೆ. ಹಿಂದೆ ಅವಿಭಕ್ತ ಕುಟುಂಬಗಳು ಇದ್ದವು. ಹಲವು ತಲೆಮಾರುಗಳಿಂದ ಎಷ್ಟೇ ಸದಸ್ಯರು ಕುಟುಂಬದಲ್ಲಿ ಇದ್ದರೂ ಅವರು ಬೇರೆ ಹೋಗುತ್ತಿರಲಿಲ್ಲ, ಪಾಲಾಗುತ್ತಿರಲಿಲ್ಲ. ಆದರೆ ಇಂದು ಆ ಪರಿಸ್ಥಿತಿ ಬದಲಾಗಿದ್ದು ಚಿಕ್ಕ-ಚಿಕ್ಕ ಕುಟುಂಬಗಳಾಗಿ ಪಾಲಾಗಿರುವುದನ್ನು ಕಾಣಬಹುದು. ಅದಕ್ಕೆ ಕಾರಣವನ್ನು ಜನಪದರು ಹುಡುಕಿದ್ದಾರೆ. ಅಂದರೆ ಈ ರೀತಿ ಆಗಲು ಸ್ತ್ರೀಯರೇ ಕಾರಣ ಎಂದಿದ್ದಾರೆ. ಒಂದು ಕುಟುಂಬದಲ್ಲಿ ಹತ್ತು ಜನ ಗಂಡಸರು ಬೇಕಾದರೆ ಸ್ವಲ್ಪ ಭಿನ್ನಾಭಿಪ್ರಾಯವಿದ್ದರೂ ಒಟ್ಟಿಗೆ ಇರುತ್ತಾರೆ. ಆದರೆ ಕೇವಲ ಇಬ್ಬರೇ ಇಬ್ಬರು ಸ್ತ್ರೀಯರು ಆ ರೀತಿ ಇರಲು ಸಾಧ್ಯವಿಲ್ಲ. ಅದಕ್ಕೆ ಕಾರಣಗಳು ಹಲವಾರು ಇರುತ್ತವೆ. ಎಂಬುದನ್ನು ಜನಪದರು ತಿಳಿಸಿದ್ದಾರೆ. ಇಲ್ಲಿ 'ಕರೀ ತಲೆರು' ಎಂದರೆ ಹೆಂಗಸರು. ಹಿಂದೆ ಹಳ್ಳಿಗಾಡಿನಲ್ಲಿ ಗಂಡಸರು ಮುಂದಲೆಯ ಅರ್ಧಭಾಗವನ್ನು ಅರ್ಧಚಂದ್ರಾಕೃತಿಯಲ್ಲಿ ಬೋಳಿಸಿಕೊಂಡು ಉಳಿದ ಜುಟ್ಟನ್ನು ಗಂಟು ಹಾಕಿಕೊಳ್ಳುತ್ತಿದ್ದರು. ಆದ್ದರಿಂದ ಬೋಳಿಸಿದ ಮುಂದಲೆ ಗಂಡಸರಿಗೆ ಬೆಳ್ಳಗಿರುತ್ತಿದ್ದರಿಂದ, ಬೋಳಿಸದ ಹೆಂಗಸರ ತಲೆ ತುಂಬ ದಟ್ಟವಾದ ಕರಿಕೂದಲು ಇರುತ್ತಿದ್ದರಿಂದ ಈ ಹೆಸರು ಬಂತೆಂದು ಕಾಣುತ್ತದೆ.

ಹಾಗೇ ಸಾಯುವುದಕ್ಕಿಂತ ಮದುವೆಯಾಗಿ ಸಾಯಿ

ಪ್ರತಿಯೊಬ್ಬರೂ ಮದುವೆಯಾಗಬೇಕು ಎಂಬುದನ್ನು ಈ ಗಾದೆಯು ತಿಳಿಸುತ್ತದೆ. ಮದುವೆಯಾಗದೇ ಸತ್ತರೆ ಮೋಕ್ಷ ದೊರೆಯುವುದಿಲ್ಲ ಎಂಬುದನ್ನು ನಂಬುತ್ತಾರೆ. ಆ ರೀತಿ

ವಿವಾಹವಾಗದೆ ಸತ್ತರೆ ಅವರಿಗೆ ಗೊಂಬೆ ಕೆತ್ತುತ್ತಾರೆ. ಜನಪದರು ಬೈಯುವಾಗ 'ನಿನ್ನ ಗೊಂಬೆ ಕೆತ್ತಾ' ಎನ್ನುತ್ತಾರೆ. ಎಂದರೆ ಮದುವೆಯಾಗದೇ ಸಾಯಿ ಎಂದರ್ಥ. ಗೊಂಬೆ ಕೆತ್ತುವುದು ಎಂದರೆ ಮರದಿಂದ ಪುರುಷ ಸ್ತ್ರೀ ಗೊಂಬೆ ಮಾಡಿ ಸತ್ತ ಹೆಣಕ್ಕೆ ಮದುವೆ ಮಾಡುವುದು. ಆ ರೀತಿ ಮಾಡುವುದರಿಂದ ಮೋಕ್ಷ ದೊರೆಯಲಿ ಎಂಬ ನಂಬಿಕೆ. ಆದುದರಿಂದ ಸುಮ್ಮನೆ ಸಾಯುವುದಕ್ಕಿಂತ ಮದುವೆ ಆಗಿ ಸಾಯಿ ಆ ಮೂಲಕ ಮೋಕ್ಷ ಸಿಗುತ್ತದೆ ಎಂಬ ನಂಬಿಕೆ.

ಹಾರುವ ದುಡಿಯೋದು ಹೊಟ್ಟೆಗೆ

ತುರುಕ ದುಡಿಯೋದು ಬಟ್ಟೆಗೆ

ಒಕ್ಕಲಿಗ ದುಡಿಯೋದು ದಂಡಕ್ಕೆ

ಹೊಲೆಯ ದುಡಿಯೋದು ಹೆಂಡಕ್ಕೆ

ಈ ಗಾದೆಯು ಸಮಾಜದಲ್ಲಿ ವಿವಿಧ ವರ್ಗದವರ ಮನೋಭಾವವನ್ನು ತಿಳಿಸಲಾಗಿದೆ. ಹಾರುವ ಎಂದರೆ ಬ್ರಾಹ್ಮಣ. ಇವನ ವೃತ್ತಿ ವಿವಿಧ ಮನೆಗಳಿಗೆ ಹೋಗಿ ಅವರಿಂದ ಏನನ್ನಾದರೂ ಪಡೆಯುವುದು. ಆ ಮೂಲಕ ಜೀವನ ಸಾಗಿಸುವುದು. ಆದರೆ ಅವನು ಇದೆಲ್ಲವನ್ನು ಮಾಡುವುದು ಹೊಟ್ಟೆಗೆ. 'ಹಸಿದ ಹಾರುವನ್ನ ಮಾತಾಡಿಸಬ್ಯಾಡ, ಉಂಡ ತುರುಕನ್ನ ಮಾತಾಡಿಸಬ್ಯಾಡ' ಎಂಬಂತೆ. ಹಸಿದಾಗ ಆತ ಈದ ಹುಲಿಯಂತೆ ಎತ್ತೆಂದರತ್ತ ಯಾರ ಮೇಲಾದರೂ ರೇಗಾಡುತ್ತಾನೆ. ಅವನಿಗೆ 'ಉದರ ಪೋಷಣೆಯೇ ಮುಖ್ಯ' ಆದುದರಿಂದ ಆತ ದುಡಿಯುವುದೆಲ್ಲ ಹೊಟ್ಟೆಗೆ. ಹಾಗೆಯೆ ತುರುಕ ಅಂದರೆ ಮುಸ್ಲಿಂರು (ಸಾಬಿ) ಯಾವಾಗಲು ನಯವಾದ ಇಸ್ತ್ರೀ ಮಾಡಿದ ಮಜಭೂತಾದ ಬಟ್ಟೆ ಧರಿಸಿ ಸುಗಂಧ ದ್ರವ್ಯ ಲೇಪಿಸಿಕೊಳ್ಳುವುದರಲ್ಲೇ ಅವರ ಜೀವನ ಸರಿಯಾದ ಪರಿಸ್ಥಿತಿ ಇರದಿದ್ದರೂ ದುಡಿದದ್ದರಿಂದ ಬಟ್ಟೆಗೆ ಖರ್ಚು ಮಾಡುತ್ತಾರೆ. ಫಟಾ ನೋಡಿದರೆ 'ಫಟಾನುಫಟಿ ಒಳಗೆ ನೋಡಿದರೆ ಲೊಟಾಪಿಟಿ' ಎಂಬಂತೆ. ಆದರಿಂದ ಅವರು ದುಡಿದ್ದದ್ದು ಎಲ್ಲ ಬಟ್ಟೆಗೆ. ಹಾಗೆಯೇ ಒಕ್ಕಲಿಗ ಸ್ಥಿತಿ ಇದಕ್ಕಿಂತ ಭಿನ್ನವಾಗಿಲ್ಲ. ಹಲವಾರು ತಿಂಗಳು ಕಷ್ಟಪಟ್ಟು ದುಡಿದು ಬೇರೆಯವರಿಗೆ ನೀಡುತ್ತಾನೆ. ಅವನು ಸಾಲಗಾರನಾದುದರಿಂದಲೋ ಅಥವಾ ಇತರರಿಗೆ ದಾನ ಮಾಡುವುದರಿಂದಲೋ ದುಡಿದದ್ದೆಲ್ಲ ದಂಡವಾಗುತ್ತದೆ. ಇವನ ಹೊಟ್ಟೆಗೆ ತಣ್ಣೀರು ಬಟ್ಟೆಯೇಗತಿ. ಹೊಲೆಯರು ಹೆಂಡಕ್ಕೆ ದಾಸರು. 'ಸಾವಿರ ಬಂದರೂ ಸಂಜೆಗೆ ಲಾಯ' ಎಂಬಂತೆ. ಬೆಳಗಿನಿಂದ ಸಂಜೆಯವರಗೆ ಶ್ರಮಪಟ್ಟು ದುಡಿದು ಸಂಪಾದಿಸುತ್ತಾರೆ. ಆದರೆ ಅದನ್ನು ತೆಗೆದುಕೊಂಡು ಹೋಗಿ ಹೆಂಡದಂಗಡಿಗೆ ಹಾಕುತ್ತಾರೆ. ಇವೇ ಮುಂತಾದ ಅಂಶಗಳನ್ನು ಈ ಗಾದೆಯು ತಿಳಿಸುತ್ತದೆ.

ಹಿರಿ ಅಣ್ಣನ ಹೆಂಡತಿ ಹೆತ್ತ ತಾಯಿಗೆ ಸಮಾನ

ಅಣ್ಣನ ಹೆಂಡತಿಗೆ ಸಮಾಜ ನೀಡಿರುವ ಸ್ಥಾನಮಾನವನ್ನು ಈ ಗಾದೆ ತಿಳಿಸುತ್ತದೆ. ಈ ಗಾದೆಗೆ ಸಂವಾದಿಯಾದ ಗಾದೆ 'ಅತ್ತಿಗೆ ತಾಯಿ ಸಮಾನ' ಅತ್ತಿಗೆ ಅಂದರೆ ಅಣ್ಣನ ಹೆಂಡತಿಯನ್ನು ತಾಯಿಯಂತೆ ಪ್ರೀತಿಸಬೇಕು ಎಂಬುದನ್ನು ಈ ಗಾದೆಯು ತಿಳಿಸುತ್ತದೆ.

ಹೀಗೆ ಸಮಾಜದ ಸಮಸ್ತ ಮುಖಗಳನ್ನೂ ವಿವಿಧ ಕೋನಗಳಿಂದ ದೃಷ್ಟಿಸಿ ಹೊಸ-ಹೊಸ ನುಡಿಚಿತ್ರಗಳನ್ನು ಧಾರಾಳವಾಗಿ ಕೊಡುವ ಎಲ್ಲ ಸಾಮಾಜಿಕ ಗಾದೆಗಳನ್ನು ಪರಿಶೀಲಿಸುವುದು ಅಸಾಧ್ಯ. ಆದರೂ ಆ ಮಟ್ಟಿನ ಸ್ವಲ್ಪ ಪ್ರಯತ್ನವನ್ನು ಮಾಡಲಾಗಿದೆ. ಜನಸಾಮಾನ್ಯರ ಜೀವನದ ಘಟನೆಗಳು ಬಹು ಗಾದೆಗಳಿಗೆ ವಸ್ತುವಾಗಿದ್ದು ಅವುಗಳ ಮೂಲಕ ಸಮಾಜದ ಅಂಶಗಳನ್ನು ಬಿಂಬಿಸುವ ಮೌಲ್ಯಗಳನ್ನು ಗುರುತಿಸಲಾಗಿದೆ.

## ೫. ಜಾನಪದ ಗಾದೆಗಳಲ್ಲಿ ಸಾಹಿತ್ಯಿಕ ಮೌಲ್ಯ.

ಗಾದೆಗಳು ಸಾಹಿತ್ಯವೂ ಹೌದು, ಶಾಸ್ತ್ರವೂ ಹೌದು. ಗಾದೆಗಳು ಸಾಹಿತ್ಯವೂ ಹೌದು ಎಂದಾಗ ಶಿಷ್ಟ ಸಾಹಿತ್ಯದೊಡನೆ ಹೋಲಿಸಿ ನೋಡುವ ಆತುರ ತೋರಬಹುದು: ಆದರೆ ಅದರ ಅಗತ್ಯವಿಲ್ಲ. ಮೂಲಭೂತವಾಗಿಯೇ ಕೆಲವು ವ್ಯತ್ಯಾಸಗಳೂ ಸಮಸ್ಯೆಗಳೂ ಹುಟ್ಟಿಕೊಳ್ಳುತ್ತವೆ; ಉದ್ದೇಶದಲ್ಲಿಯೂ ಪರಿಣಾಮದಲ್ಲಿಯೂ ಬೇರೆಯಾಗುತ್ತವೆ. ಶಿಷ್ಟಕೃತಿ ತನ್ನ ಸೃಷ್ಟಿ ಮೂಲದಲ್ಲಿ ಒಬ್ಬನ ರಚನೆ: ಅದು ಬದಲಾವಣೆ ರಹಿತವಾದುದು. ಸಾಹಿತ್ಯವನ್ನು ಸೃಷ್ಟಿಸಬೇಕೆಂಬ ಉದ್ದೇಶದಿಂದಲೇ ಅದು ಸೃಷ್ಟಿಯಾದುದು. ಆದ್ದರಿಂದು ಅದು ಪ್ರಜ್ಞಾಪೂರ್ವಕವಾಗಿ ಕಲಾತ್ಮಕವಾಗಿರುವುದು ಸಾಧ್ಯವಿರುತ್ತದೆ. ಆದರೆ ಗಾದೆ ಸೃಷ್ಟಿ ಮೂಲದಲ್ಲಿ ಒಬ್ಬನದಾದರೂ ಅನಂತರ ಅದು ಸಮಷ್ಟಿಯದು: ಬದಲಾವಣಾ ರೂಪದ್ದು. ಸಾಹಿತ್ಯದ ಉದ್ದೇಶದಿಂದ ಸೃಷ್ಟಿಯಾದುದಲ್ಲ: ಕಲಾತ್ಮಕತೆ ಇದ್ದರೂ ಪ್ರಜ್ಞಾಪೂರ್ವಕವಲ್ಲ. ಗಾದೆಗಳು ಬದುಕಿನೊಡನೆ ಪ್ರಾಚೀನ ಕಾಲದಿಂದಲೂ ಕ್ರಿಯಾಶೀಲ ಸಂಬಂಧವನ್ನು ಪಡೆದು ಬಂದಿರುವಂಥವು. ಒಂದು ರೀತಿಯಲ್ಲಿ ಅವು ವಚನಗಳನ್ನು ಹೋಲುತ್ತವೆ. ವಚನಗಳು ಕೂಡ ಸಾಹಿತ್ಯ ಮತ್ತು ಶಾಸ್ತ್ರಗಳೆರಡೂ ಆಗಿವೆ. ವಚನಗಳು ತಮ್ಮ ಸೃಷ್ಟಿ ಮೂಲದಲ್ಲಿ ಸಾಹಿತ್ಯದ ಉದ್ದೇಶವಿಲ್ಲದಿದ್ದರೂ ಸಾಹಿತ್ಯವೆನಿಸಿಕೊಂಡಿರುವಂತೆಯೇ ಗಾದೆಗಳೂ ಕೂಡ ಸಾಹಿತ್ಯವಾಗಿ ಪರಿಣಮಿಸಿವೆ.

ಸಾಹಿತ್ಯದಲ್ಲಿ ಅನುಭವ ಮತ್ತು ಅಭಿವ್ಯಕ್ತಿ ಎಂಬೆರಡು ಮುಖ್ಯ ವಿಷಯಗಳು. ಒಂದು ರೀತಿಯಲ್ಲಿ ಅನುಭವದ ಸುಂದರವಾದ ಅಭಿವ್ಯಕ್ತಿಯೇ ಸಾಹಿತ್ಯ. ಈ ಸರಳ ಸೂತ್ರವನ್ನು ಗಾದೆಗಳಿಗೂ ಅನ್ವಯಿಸಿ ವ್ಯಾಖ್ಯಾನಿಸುವ ಸಾಧ್ಯತೆಯಿರುತ್ತದೆ. ಸಾಮಾನ್ಯವಾಗಿ ಗಾದೆಗಳನ್ನು "ಹಲವರ ಜ್ಞಾನ, ಒಬ್ಬನ ವಿವೇಕ" ಎಂಬುದಾಗಿ ವರ್ಣಿಸಬಹುದು. ಹಲವರ ಜ್ಞಾನ ಒಬ್ಬನ ಸೃಷ್ಟಿ ವಿವೇಕದಲ್ಲಿ ಮೂಡಿ ಗಾದೆಯಾಯಿತೆಂಬುದು ಇಲ್ಲಿನ ಅರ್ಥ. ಇಲ್ಲಿನ 'ಜ್ಞಾನವೇ' ಅನುಭವ. 'ವಿವೇಕ'ವೇ ಅಭಿವ್ಯಕ್ತಿ. ಅಂದರೆ ಹಲವರ ಅನುಭವ ಒಬ್ಬನಲ್ಲಿ ಅಭಿವ್ಯಕ್ತಿ ಪಡೆಯಿತು ಎಂದಾಯಿತು. ಅನುಭವ ಎಲ್ಲರಲ್ಲಿಯೂ ಇರುವುದಾದರೂ ಅಭಿವ್ಯಕ್ತಿ ಸಾಮರ್ಥ್ಯವನ್ನು ನಿರೀಕ್ಷಿಸಲು ಸಾಧ್ಯವಿಲ್ಲ. ಅನುಭವವಿದ್ದು ಅಭಿವ್ಯಕ್ತಿ ಸಾಮರ್ಥ್ಯ ಹೊಂದಿದವರ ಮೂಲಕ ಗಾದೆ ರಚಿತವಾಯಿತೆಂಬುದನ್ನು ಮರೆಯಲಾಗದು. ಆದ್ದರಿಂದ ಗಾದೆಗಳನ್ನು ಒಯ್ಯುವವರೆಲ್ಲ ಇದರ ಸೃಷ್ಟಿಕಾರರಲ್ಲ. ಇಂಥ ಸಾಮರ್ಥ್ಯವನ್ನು ಹೊಂದಿರುವ ಕೆಲವರು ಮಾತ್ರ ಇದಕ್ಕೆ ಕಾರಣರಾಗಿದ್ದಾರೆ. ಶಿಷ್ಟ ಸಾಹಿತ್ಯದಲ್ಲಿ ಅನುಭವವನ್ನು ಅಭಿವ್ಯಕ್ತಿಯ ಚೌಕಟ್ಟಿಗೆ ತೊಡಿಸುವ ಕೆಲಸ ನಡೆದರೆ, ಗಾದೆಗಳಲ್ಲಿ ಅನುಭವ ಮತ್ತು ಅಭಿವ್ಯಕ್ತಿಗಳು ಒಟ್ಟಿಗೆ ಜನ್ಮ ತಾಳುವುದನ್ನು ಕಾಣುತ್ತೇವೆ.

ಸಾಮಾನ್ಯ ಜನತೆ ತನ್ನ ಸುತ್ತಮುತ್ತಲಿನ ಜಗತ್ತಿನ ಬಗ್ಗೆಯಾವ ರೀತಿಯಲ್ಲಿ ಗಮನಿಸುತ್ತದೆ, ಎಷ್ಟು ರೀತಿಯಲ್ಲಿ ಅನುಭವಿಸುತ್ತದೆ ಮತ್ತು ಹೇಗೆ ಆಲೋಚಿಸುತ್ತದೆ ಎಂಬುದರ ಸೂಕ್ಷ್ಮಗಳಿಗೆ ಗಾದೆಗಳು ಅಭಿವ್ಯಕ್ತಿ ನೀಡಿವೆ. ಇವುಗಳಲ್ಲಿ ಎದ್ದು ಕಾಣುವುದು ಜನರ ಸಾಮಾನ್ಯ ಜ್ಞಾನ. ಇಷ್ಟೇ ಪ್ರಭಾವಿತವಾದ ಇನ್ನೊಂದು ಗುಣ ಸಂವೇದನೆ ಜೀವನದ ನಾನಾ ಭಾಗಗಳಲ್ಲಿ ಅವರಿಗಿರುವ ಜ್ಞಾನನುಭವದ ಜೊತೆಗೆ ತಮ್ಮ ವಿವೇಕದ ಒರೆಗಲ್ಲಿಗೆ ಹಚ್ಚಿನೋಡುವ ತೀಕ್ಷ್ಣತೆಯೂ ವ್ಯಕ್ತಗೊಂಡಿದೆ. ದೈನಂದಿನ ಜನ ಜೀವನದ ನಡುವೆಯೇ ಬೆಳೆದು ನಿಂತಿರುವ ಈ ಗಾದೆಗಳು ಪಂಕದಿಂದ ಅರಳಿನಿಂತ ಪಂಕೇಜಗಳಂತೆ ಕಾಣುತ್ತವೆ. ಜನಸಾಮಾನ್ಯರ ಈ ಗಾದೆಗಳಲ್ಲಿ ಅಭಿವ್ಯಕ್ತಿವಾಗಿರುವ ಕಾವ್ಯ ಶಕ್ತಿ ಹಾಗೂ ಸಂಸ್ಕೃತಿ ಭಕ್ತಿಯನ್ನು ಅನ್ಯಾದೃಶವೆನ್ನದೆ ವಿಧಿಯಿಲ್ಲ. ಗಾದೆಗಳನ್ನು ಗಮನಿಸುತ್ತಿದ್ದಂತೆಯೇ ವಿವಿಧಾನುಭವಗಳ ಗುಂಗಿಗೆ ಒಳಗಾಗುತ್ತೇವೆ. ಗ್ರಾಮ ಜೀವನದ ನೈಜ ಭಾವಗಳ ನೇರ ಅಭಿವ್ಯಕ್ತಿಯನ್ನು ಕಾಣುತ್ತೇವೆ. ಗಾದೆಗಳಲ್ಲಿ ಕೆಲವು ಬೆಳದಿಂಗಳಿನಂತೆ ತಂಪಾದರೆ ಮತ್ತೆ ಕೆಲವು ಬಿಸಿಲಿನಂತೆ ಮೈಸುಡುತ್ತವೆ. ಬೆಂಕಿಯ ಕಿಡಿಗಳಂತೆ ಕೆಲವಾದರೆ ಇಬ್ಬನಿಯಂಥವು ಮತ್ತೆ ಕೆಲವು; ಕೆಲವು ಮುತ್ತಿಕ್ಕಿದರೆ ಮತ್ತೆ ಕೆಲವು ಮುತ್ತಿಗೆ ಹಾಕುತ್ತವೆ. ಇನ್ನು ಕೆಲವು ಸಿಡಿಲ ಪೊಟ್ಟಣಗಳೇ ಸರಿ. ಹೀಗೆ ಅನುಭವಿಸುವ ಹೃದಯಕ್ಕೆ ಆಶ್ಚರ್ಯಕರವಾದ ರೀತಿಯಲ್ಲಿ ಸೌಂದರ್ಯಬೋಧೆ ನೀಡುತ್ತವೆ. ಗಾದೆಗಳ ಒಂದು ಕೊನೆ ಸಂಸ್ಕೃತಿ ಮತ್ತೊಂದು ಕೊನೆ ಸಾಹಿತ್ಯ. ಆದರೆ ಇವು ಕೇವಲ ಕೊನೆಗಳೇ ಅಲ್ಲ. ಹಾಸುಹೊಕ್ಕು ಕೂಡ ಯಾವುದೇ ಒಂದು ಒಳ್ಳೆಯ ಗಾದೆ ಇವೆರಡನ್ನೂ ಒಟ್ಟಿಗೆ ಹೇಳುವುದಾಗಿರುತ್ತದೆ.

ಗಾದೆಗಳು ಏಕ ಕಾಲದಲ್ಲಿ ಆಸ್ವಾದನೀಯವೂ ವಿಚಾರ ಪ್ರಚೋದಕವೂ ಆಗಿವೆ. ಇವುಗಳನ್ನು ದಿನ ನಿತ್ಯದ ಅನುಭವ ಕೋಶದಿಂದ ತೆಗೆದ ಸರಳವೂ ಆತ್ಮಸಾಕ್ಷೀ ಭೂತವೂ ಆದ ಹೋಲಿಕೆಗಳಿಂದ ಚಿತ್ರಿಸಿರುವುದು ಸಾಹಿತ್ಯಿಕ ಮೌಲ್ಯವನ್ನು ಧೃಢಪಡಿಸುತ್ತದೆ. ಗಾದೆಗಳ ಮಾಸದ ಹೆಸರಿಗೆ ಅವುಗಳಲ್ಲಿರುವ ಸರಳ ಸಾಮಾನ್ಯ ಕೌಟುಂಬಿಕ ರೂಪಕಗಳು ಕಾರಣವಾಗಿದೆ. ಗಾದೆಗಳ ಸಮರ್ಥ ಅಭಿವ್ಯಕ್ತಿಗೆ ಈ ರೂಪಕ ಶಕ್ತಿ ಬಹಳಷ್ಟು ಕೆಲಸ ಮಾಡಿದೆ. ನಿಲುಕದ ವಸ್ತುವಿಗೆ ಕೈ ಚಾಚದೆ ತನ್ನ ಸುತ್ತಮುತ್ತಲ ವಸ್ತು ಸಾಮಗ್ರಿಯನ್ನು ದೃಷ್ಟಾಂತ ರೂಪಕಗಳನ್ನಾಗಿ ಅಳವಡಿಸಿಕೊಂಡಿರುವುದು ಅನುಭವದ ಪ್ರಾಮಾಣಿಕತೆಗೆ ಕಾವ್ಯ ಕಲೆಯ ಸೂಕ್ಷ್ಮ ದೃಷ್ಟಿಗೆ ನಿಚ್ಚಳವಾದ ನೈಜ ಸಾಕ್ಷಿಯಾಗಿದೆ. ಸಾಹಿತ್ಯದ ಮೌಲ್ಯ ವಿವೇಚನೆಗೆ ರೂಪಕಾದಿ ಪರಿಕರಗಳು ಮೂಲ ಮಾನವಾಗಿರುವುದಾದರೆ ಇಂತಹ ಹಲವಾರು ಗಾದೆಗಳು ಉತ್ತಮ ಸಾಹಿತ್ಯಾಶಗಳಿಂದ ಕೂಡಿರಲು ಅರ್ಹವಾಗಿವೆ.

ಇನ್ನು ಮುಂದೆ ಗಾದೆಗಳಲ್ಲಿ ಸೂಕ್ಷ್ಮವಾಗಿ ಅಡಗಿರುವ ಸಾಹಿತ್ಯಿಕ ಮೌಲ್ಯಗಳನ್ನು ಕುರಿತು ಚರ್ಚಿಸೋಣ.

ಅತ್ತೇ ಮನೇಲಿ ಹೆಂಗಿದ್ದಿ ಮಗಳೆ ಅಂದ್ರೆ

ಮಳ್ಳಾಗೆ ಹಾದಿ ನಡೆದ್ಹಂಗೆ

ಮೊಳಕೈಗೆ ಚಿಲಕ ಹೊಡೆದ್ಹಂಗೆ

ಅಭಿವ್ಯಕ್ತಿಯ ಅತ್ಯುತ್ತಮ ರೀತಿಯೊಂದನ್ನು ಇದರಲ್ಲಿ ಕಾಣುತ್ತೇವೆ. ಅತ್ತೆ ಮನೆಯಲ್ಲಿ ಸೊಸೆಯೊಬ್ಬಳ ಅನುಭವ ಅತ್ಯಂತ ಕಲಾತ್ಮಕವಾಗಿ ಮತ್ತು ಪರಿಣಾಮಕಾರಿಯಾಗಿ ವ್ಯಕ್ತವಾಗಿದೆ. ಇದನ್ನು ಚಿತ್ರಿಸಲು ಎರಡು ಉಪಮಾಲಂಕಾರಗಳನ್ನು ಬಳಸಿಕೊಳ್ಳಲಾಗಿದೆ. ಮರಳಿನಲ್ಲಿ ಹಾದಿ ನಡೆದ ಅನುಭವ ಒಂದರಲ್ಲೂ ಮೊಣಕೈಗೆ ಚಿಲಕ ತಾಗಿಸಿಕೊಂಡ ಅನುಭವ ಮತ್ತೊಂದರಲ್ಲೂ ಇದೆ. ಮರಳಿನಲ್ಲಿ ಹೆಜ್ಜೆ ಇಟ್ಟಾಗ ಹಿಂದಕ್ಕೆ ಸರಿದಂತಾಗಿ. ಹೊತುಕೊಂಡಂತಾಗಿ ಮುಂದಕ್ಕೆ ನಡೆಯುವುದೇ ಕಷ್ಟವಾಗುತ್ತದೆ. ಬಾಗಿಲಿನ ಚಿಲಕ ಮೋಣಕೈಗೆ ತಾಗಿದಾಗಲಂತೂ ಪ್ರಾಣವೇ ಹೋದಂತಾಗುತ್ತದೆ. ಹೀಗೆ ಆ ಹೆಣ್ಣುಮಗಳ ಜೀವನ ಮುನ್ನಡೆಯಲು ದುಸ್ತರವಾಗಿ ಮತ್ತು ಅತ್ಯಂತ ನೋವಿನದಾಗಿ ಇತ್ತೆಂಬುದನ್ನು ಈ ಎರಡು ಹೋಲಿಕೆಗಳು ಸಮರ್ಥವಾಗಿ ಮತ್ತು ಸಮರ್ಪಕವಾಗಿ ಬಣ್ಣಿಸುತ್ತವೆ. ಈ ಅಲಂಕಾರಿಕ ಅಭಿವ್ಯಕ್ತಿ ಗಾದೆಗೆ ಗಟ್ಟಿತನವನ್ನೂ ಸುಲಭ ಸಂವಹನ ಶಕ್ತಿಯನ್ನೂ ಕೊಟ್ಟಿದೆ ಗಾದೆ ಸಂವಾದ ರೂಪದಲ್ಲಿರುವುದು ಮತ್ತಷ್ಟು ಉತ್ತಮತೆಗೆ ಕಾರಣವಾಗಿದೆ.

ಅಂಬಲಿ ಕುಡಿದೋನು ಮಡಕೆ ಹೊತ್ತಾನ?

ಈ ಗಾದೆಯಲ್ಲಿ ಸ್ವಭಾವೋಕ್ತಿ ಅಲಂಕಾರ ಇರುವುದನ್ನು ಗಮನಿಸಬಹುದು. ಒಂದು ವಿಷಯವನ್ನು ತಿಳಿಸಲು ಯಾವ ಅಲಂಕಾರದ ನೆರವನ್ನೂ ಪಡೆಯದೇ ನೇರ ಅಭಿವ್ಯಕ್ತಿ ಮುಖಾಂತರ ಅರ್ಥದ ತೀವ್ರತೆಯನ್ನು ತಿಳಿಯ ಪಡಿಸಲಾಗಿದೆ. ಇಲ್ಲಿ 'ಮಡಕೆ' ಎಂಬ ಪದಕ್ಕೆ 'ಆರು' 'ನೇಗಿಲು' ಎಂಬ ಅರ್ಥವಿದೆ. ಈ ರೀತಿ ತೆಲಗು ಭಾಷೆಯ ಸಂಪರ್ಕ ಇರುವ ಹಿಂದೂಪುರ, ಮಧುಗಿರಿಯ ಕಡೆ ಬಳಸುತ್ತಾರೆ. ಅಂಬಲಿಯು ರಾಗಿಯ ಹಿಟ್ಟಿನಿಂದ ಮಾಡಿದ ತೆಳುವಾದ ಪಾನೀಯ. ಆದುದರಿಂದ ಇದನ್ನು ಕುಡಿದರೆ ಹೆಚ್ಚು ಹೊತ್ತು ದುಡಿಯಲು ಸಾಧ್ಯವಿಲ್ಲ. ತೆಳುವಾದ ಪಾನೀಯವಾದುದರಿಂದ ಬೇಗ ಜೀರ್ಣವಾಗುತ್ತದೆ ಮತ್ತು ಹಸಿವು ಅತಿ ಬೇಗ ಉಂಟಾಗುತ್ತದೆ. ಅಲ್ಲದೆ ರಾಗಿಯ ಮುದ್ದೆಯಷ್ಟು ಶಕ್ತಿಯನ್ನು ನೀಡುವುದಿಲ್ಲ. ಅಂಬಲಿ ಕುಡಿದು ಅಶಕ್ತನಾಗಿರುವವನು ಭಾರವಾದ ನೇಗಿಲನ್ನು ಹೊರಲು ಸಾಧ್ಯವಿಲ್ಲ. ಉಳುಮೆಯನ್ನು ಧೀರ್ಘಕಾಲ ಮಾಡಲು ಆಗುವುದಿಲ್ಲ ಎಂಬ ಅರ್ಥ ಪ್ರತೀತಿಯನ್ನು ಹೊಂದಿದೆ.

ಅಲಲಾ ಅನ್ನೋ ಅಳ್ಳೀಮರ ನಂಬಬಹುದು

ಮಳ್ಳಿ ಹಂಗಿರೋ ಕಳ್ಳೀ ನಂಬಾರ್ದು.

ಮನುಷ್ಯನ ವಿಭಿನ್ನ ಸ್ವಭಾವವನ್ನು ಪ್ರಕೃತಿ ರೂಪಕಗಳಿಂದ ಚಿತ್ರಿಸಿರುವುದು ಇಲ್ಲಿನ ಉದ್ದೇಶವಾಗಿದೆ. ಇದರಲ್ಲಿ ಬಳಸಲಾಗಿರುವ 'ಅಳ್ಳಿ' ಮತ್ತು 'ಕಳ್ಳಿ' ಪ್ರಾಸಕ್ಕಾಗಿ ಮಾತ್ರ ಬರದೆ, ಭಿನ್ನ ಪ್ರಕೃತಿಯನ್ನು ಯಶಸ್ವಿಯಾಗಿ ಚಿತ್ರಿಸುವ ಅತ್ಯುತ್ತಮ ಪ್ರಯೋಗಗಳಾಗಿವೆ. ಒಳಗೊಂದು ಹೊರಗೊಂದು ಇಲ್ಲದೆ ತೆರೆದಿಟ್ಟ ಪುಸ್ತಕದಂತೆ ಎಲ್ಲವನ್ನು ಆಡಿ ತೋರಿಸಿಬಿಡುವ ಮನುಷ್ಯ ಪ್ರಕೃತಿಗೆ ಅರಳಿಮರ ರೂಪಕವಾಗಿದ್ದರೆ. ಏನೂ ಅರಿಯದ ಹ್ಯಾಪಾಯಿಯಂತಿದ್ದರೂ ಹಾವು ಮರಿಯನ್ನು ಮಡಗಿರುವ ವ್ಯಕ್ತಿ ಪ್ರಕೃತಿಗೆ ಕಳ್ಳಿಗಿಡ ರೂಪಕವಾಗಿದೆ. ಅರಳಿಮರ ಪ್ರಯೋಜನಕಾರಿಯೂ ನಿರಪಯಕಾರಿಯೂ ಆದುದು. ಅದರ ಅಲ್ಲಾಡುವ ಎಲೆಗಳು ಕೂಡ – ವ್ಯಕ್ತಿಯ ಮಾತುಗಳು– ತಂಗಾಳಿಯನ್ನೇ ತರುತ್ತವೆ. ಆದರೆ ಕಳ್ಳಿಯ ಹೊರ ರೂಪ ಮುಳ್ಳು, ಒಳಗಿನ ಹಾಲು ಅಪಾಯಕಾರಿ, ಒಟ್ಟು ನಿರುಪಯುಕ್ತ. ಅರಳಿಮರ ನಮ್ಮ ಸಂಸ್ಕೃತಿಯ ಒಂದು ಭಾಗವೇ ಆಗಿದ್ದು. ಪವಿತ್ರತೆಗೆ ಸಂಕೇತವೂ ಆಗುತ್ತದೆ. ಆದರೆ ಊರಿನಾಚೆಯ ಒಬ್ಬೆಯೊಂದರಲ್ಲಿ ಬೆಳೆಯುವ ಕಳ್ಳಿಗೆ ಈ ಗುಣವಿರುವುದಿಲ್ಲ. ಹೀಗಾಗಿ ಯಾರನ್ನು ನಂಬಬಹುದು ಮತ್ತು ಯಾರನ್ನು ನಂಬಬಾರದು ಎಂಬುದರ ವಿಶ್ಲೇಷಣೆ ಎರಡು ರೂಪಕಗಳ ಮೂಲಕ ಅತ್ಯುತ್ತಮ ರೀತಿಯಲ್ಲಿ ನಡೆದಿದೆ ಮೊತ್ತದಲ್ಲಿ ಜೀವನವನ್ನು ಪೃಥಕ್ಕರಿಸಿ ನೋಡುವ ದೃಷ್ಟಿಯನ್ನು ಪ್ರಸ್ತುತ ಗಾದೆ ನಿವೇದಿಸಿದೆ.

ಇಡಗರ ಹೇಳೆ ಹಿರೇ ಸೊಸೆ ಅಂದ್ರೆ

ಹುಲ್ಲು ಮಾರಿದ ದುಡ್ಡು ಎಲ್ಲಿಕ್ಕಲತ್ತೆ?

ಸಂವಾದ ರೂಪದಲ್ಲಿರುವ ಗಾದೆಯಲ್ಲಿ ವಿಡಂಬನೆಯನ್ನು ಅತ್ಯಂತ ಮನೋಜ್ಞವಾಗಿ ತಿಳಿಸುತ್ತದೆ. ಅತ್ತೆ ಮಿಣುಕಿ. ತಮ್ಮ ಬಗ್ಗೆ ಇಲ್ಲದ್ದನ್ನು ಇದೇ ಎಂದು ಬೇರೆಯವರೊಂದಿಗೆ ಹೇಳಿ ಅಹಂಕಾರವನ್ನು ಮೆರೆಯುವವಳು. ಒಂದು ರೀತಿಯ ಥಳುಕು ಬಳುಕಿನವಳು. ಯಾರೋ ಅಪರಿಚಿತರು ಇವಳ ಸಂಬಂಧವನ್ನು ಮಾಡಲು ಮನೆಗೆ ಬಂದಿರಬೇಕು. ಆಗ ಈ ಅತ್ತೆ ತಮ್ಮದು ಇಷ್ಟುದ್ದು. ಇಷ್ಟು ಗಾತ್ರ ಎಂದು ಹೇಳಿ. ಬಂದ ಸೊಸೆಗೆ ನಮ್ಮ ಮನೆಯ ಇಡಗರ ಹೇಳೆ ಎಂದಿರಬೇಕು. ಇಡಗರ ಎಂದರೆ ಸಂಪತ್ತು. ವೈಭವ ಎಂದರ್ಥ. ಆದರೆ ಆ ಸೊಸೆ ಬೆಳಿಗ್ಗೆಯೇ ಎದ್ದು ಹೊಟ್ಟೆಗೆ ಊಟವಿಲ್ಲದೆ ಹುಲ್ಲು ಕಿತ್ತು ಅದನ್ನು ಮಾರಿ ಬಂದು ಉಸ್ಸಪ್ಪಾ ಎಂದು ದಣಿವಾರಿಸಿಕೊಳ್ಳುತ್ತಿದ್ದಾಗ ಅತ್ತೆಯ ಈ ಮಾತನ್ನು ಕೇಳಿ ಕೋಪದಿಂದ ಎಲ್ಲರಿಗೂ ಕೇಳಿಸುವಂತೆ 'ಹುಲ್ಲು ಮಾರಿದ ದುಡ್ಡು ಎಲ್ಲಿಕ್ಕಲತ್ತೆ'? ಎಂದು ಕೇಳುತ್ತಾಳೆ.

ಇದುವರೆಗೂ ಇಲ್ಲದ್ದನ್ನು ತೋರ್ಪಡಿಸಿಕೊಂಡಿದ್ದ ಅತ್ತೆಯ ಮುಖ ಈಗ ಹೇಗಾಗಿರಬೇಡ? ಇನ್ನೂ ಹಲವಾರು ಅಂಶಗಳನ್ನು ಗಾದೆ ನೇರವಾಗಿ ಹೇಳಿದೆ ನಮ್ಮ ಊಹೆಗೇ ಬಿಟ್ಟು ಬಿಡುತ್ತದೆ.

ಎಳೀಲಾರದ ಎತ್ತು

ಮೆಳೇ ಮೇಲೆ ಬಿತ್ತು.

ಈ ಗಾದೆಯಲ್ಲಿ ಆದಿ ಮತ್ತು ಅಂತ್ಯ ಪ್ರಾಸಗಳೆರಡು ಇರುವುದನ್ನು ಕಾಣಬಹುದು. ಎಳೀ ಮತ್ತು ಮೆಳೇ ಎಂಬಲ್ಲಿ 'ಳ'ಕಾರ ಆದಿಪ್ರಾಸದ ಸ್ಥಾನದಲ್ಲಿ ಬಂದಿದೆ. ಹಾಗೆಯೇ ಎತ್ತು ಮತ್ತು ಬಿತ್ತು ಎಂಬಲ್ಲಿ 'ತ್ತು' ಅಂತ್ಯ ಪ್ರಾಸಸ್ಥಾನದಲ್ಲಿ ಬಂದಿದೆ. ಅಲ್ಲದೆ ಜನಸಾಮಾನ್ಯರ ಅನುಭವ ಅಭಿವ್ಯಕ್ತವಾಗಿರುವುದನ್ನು ಕಾಣಬಹುದು ಎಳೆಯಲು ಅಶಕ್ತವಾದ ಎತ್ತನ್ನು ಬಂಡಿಗೆ ಕಟ್ಟಿ ಅಥವಾ ಆರಿಗೆ ಕಟ್ಟಿ ಹೊಡೆದರೆ ಅದು ಸುಸ್ತಾಗಿ ಎಲ್ಲಾದರೂ ಬೀಳಬಹುದು ಎಂಬುದನ್ನು ತಿಳಿಸುತ್ತದೆ.

ಕದ್ದು ಮದುವೆಯಾಗ್ತೀವಿ

ಬಗ್ಗಿ ವಾಲಗ ಊದು.

ಅಸಂಗತ ಸಂಗತಿಯೊಂದನ್ನು ಈ ಗಾದೆಯು ತಿಳಿಸುತ್ತದೆ. ಇಲ್ಲಿ ಹೇಳುತ್ತಿರುವುದು ಒಂದು ರೀತಿಯಲ್ಲಿ ಸರಿಯಿದ್ದರೂ ಮತ್ತೊಂದು ರೀತಿಯಲ್ಲಿ ಅಸಂಗತವಾಗಿ ಕಾಣುತ್ತದೆ. ಇಲ್ಲಿ ಮದುವೆಯನ್ನು ಎಲ್ಲರ ಸಮ್ಮುಖದಲ್ಲಿ. ಎಲ್ಲರ ಅಭಿಪ್ರಾಯ ತಿಳಿದು ಸಮ್ಮತಿಯನ್ನು ಪಡೆದು ಆಗುತ್ತಿಲ್ಲ. ಆದುದರಿಂದ ಮದುವೆಯಾಗುತ್ತಿರುವ ವಿಷಯ ಯಾರಿಗೂ ತಿಳಿಯಬಾರದು. ವಾಲಗ ಊದಿದರೆ ಶಬ್ದ ತಿಳಿದು ಅಪಾಯ ಎದುರಾಗುತ್ತದೆ. ಆದರೆ ಮದುವೆಗೆ ವಾಲಗ ಬೇಕೇ ಬೇಕು. ಆದ್ದರಿಂದ ಯಾರಿಗೂ ತಿಳಿಯದಂತೆ ಬಗ್ಗಿ ವಾಲಗ ಊದು ಎಂಬುದಾಗಿದೆ. ವಾಲಗವನ್ನು ಊದಿದರೆ ಶಬ್ದ ಬರುವುದೇ ಅದರ ಮುಖ್ಯ ಗುಣ. ಬಗ್ಗಿ ಊದಿದರೂ ಅಷ್ಟೇ ನಿಂತು ಊದಿದರೂ ಅಷ್ಟೆ, ಧ್ವನಿಯಾಗಿ ವಿಷಯ ತಿಳಿಯುತ್ತದೆ. ಆದುದರಿಂದ ಬಗ್ಗಿ ವಾಲಗ ಊದು ಎಂಬುದರಲ್ಲಿ ಅರ್ಥವಿಲ್ಲ. ಈ ಕಾರಣದಿಂದ ಇದು ಅಸಂಗತ ವಿಷಯವಾಗಿದೆ.

ಗಾದೆಗಳಲ್ಲಿ ರೂಪಕಾಲಂಕಾರದಂತೆಯೇ ಉಪಮಾಲಂಕಾರವೂ ಬಳಕೆಯಾಗಿದೆ. ಇಲ್ಲಿಯೂ ಪ್ರಕೃತಿ ಪ್ರಾಣಿ, ದೈನಂದಿನ ವಸ್ತು ವಿಷಯಗಳು ಯಾವುದರಿಂದಲೂ ಉಪಮೆಗಳನ್ನು ಆರಿಸಿಕೊಳ್ಳಬಹುದು. ಜೀವನಾನುಭವವನ್ನು ದಟ್ಟವಾಗಿ ಚಿತ್ರಿಸುವುದಕ್ಕೆ ಮತ್ತು ಅಭಿವ್ಯಕ್ತಿ ಹೆಚ್ಚು ಅರ್ಥವಂತಿಕೆಯಿಂದ ಕೂಡಿರುವುದಕ್ಕೇ ಉಪಮೆಗಳೂ ಸಾಕಷ್ಟು ಸಹಾಯ ಮಾಡಿವೆ. ಇದಕ್ಕೆ

ಕಪ್ಪೆ ತಕ್ಕಡಿಗೆ ಹಾಕಿದ್ಹಂಗೆ

ಎಂಬ ಗಾದೆ ನಿದರ್ಶನ ಕಪ್ಪೆಯನ್ನು ತಕ್ಕಡಿಗೆ ಹಾಕಿದಂತೆಲ್ಲಾ ಕುಪ್ಪಳಿಸಿ ಹೊರ ಹಾರುವುದು. ಅದರ ಸ್ವಭಾವ, ಮೌನವನ ಚಂಚಲ ಸ್ವಭಾವಕ್ಕೆ ಇದು ಹೋಲಿಕೆ. ಪ್ರಾಣಿ ಸ್ವಭಾವವೊಂದರ ಮೂಲಕ ಮಾನವ ಸ್ವಭಾವವೊಂದನ್ನು ಅತ್ಯಂತ ಸಮರ್ಥವೂ ಅಡಕವೂ ಆದ ಅಭಿವ್ಯಕ್ತಿಯಿಂದ ಚಿತ್ರಿಸಲಾಗಿದೆ. ಪ್ರಾಣಿ ಹೋಲಿಕೆಯ ಹಾಗೆಯೇ ವಸ್ತು ಹೋಲಿಕೆಯೂ ಮುಖ್ಯವೇ ಇದಕ್ಕೆ.

ಹೆಂಡ್ರೆದುರು ಗಂಡ, ಕೆರೆಗೆ ಬಿದ್ದ ಕೆಂಡ

ಒಂದು ಉದಾಹರಣೆ, ಪ್ರಭಾವಶಾಲಿಯಾದ ಹೆಂಡತಿಯ ಎದುರು ಕೋಪಗೊಂಡ ಗಂಡನ ಪರಿಸ್ಥಿತಿಯನ್ನು ವಿಡಂಬನಾತ್ಮಕವಾಗಿ ಹೇಳಲಾಗಿದೆ. ಇದಕ್ಕೆ ಬಳಕೆಯಾಗಿರುವ 'ಕೆರೆಗೆ ಬಿದ್ದ ಕೆಂಡ'ದ ಹೋಲಿಕೆ ಸಮುಚಿತವಾಗಿದೆ. ಇದರಲ್ಲಿ 'ಕೆಂಡ' ಕೋಪಗೊಂಡ ಗಂಡನ ಸ್ಥಿತಿಯನ್ನೂ 'ಕೆರೆಗೆ ಬಿದ್ದ ಕೆಂಡ' ಹೆಂಡತಿಯ ಮುಂದೆ ಅವನ ಕೋಪವೆಲ್ಲಾ ತಣ್ಣಗಾದ ವಿಚಾರವನ್ನು ಹೇಳುತ್ತದೆ. 'ಕೆರೆಗೆ ಬಿದ್ದ ಕೆಂಡ'ಕ್ಕೆ ಮತ್ತೂ ಅರ್ಥವಿದೆ. ಕೆಂಡ ನೀರಿನಿಂದ ತೆಣ್ಣಗಾದ ಸ್ಥಿತಿಯನ್ನಷ್ಟೇ ಹೇಳದೆ, ಅದು ಕೆರೆಯಲ್ಲಿ ಮುಳುಗಿದುದನ್ನು ತಿಳಿಸುತ್ತದೆ. ಇದರಿಂದ ಅದರ ಅಸ್ಥಿತ್ವವೇ ಇಲ್ಲದಂತಾಯಿತು. ಹೆಂಡತಿಯ ಮುಂದೆ ಗಂಡನ ಕೋಪ ಇಳಿದುದಷ್ಟೇ ಅಲ್ಲ. ಅವನು ತನ್ನ ತನವನ್ನೇ ಕಳೆದುಕೊಂಡದನ್ನು ತಿಳಿಸುತ್ತದೆ. ಈ ಎಲ್ಲ ಗಾದೆಗಳಲ್ಲಿ ಜೀವನದ ನಾಡಿ ಹಿಡಿದು ನೋಡುವ ಮೋಡಿಯೇ ಇದೆಯೆನ್ನಬೇಕು. ಗಾದೆಗಳು ನಿರೂಪಣೆಯ ರೂಪದಲ್ಲಿದ್ದಾಗ ಸಾಹಿತ್ಯದ ದೃಷ್ಟಿಯಿಂದ ಮಹತ್ವದಾಗುವುದಿಲ್ಲ: ಆದರೆ ರೂಪಕ ಉಪಮಾದಿ ಅಲಂಕಾರಗಳಿಂದ ಅಭಿವ್ಯಕ್ತಿಯ ಮೈ ತುಂಬಿಕೊಂಡಿದ್ದಾಗ ಸಹಜವಾಗಿಯೇ ಸಾಹಿತ್ಯಾಂಶಗಳಿಂದ ಕೂಡಿರುತ್ತವೆ.

ಕೀತ ಬೆಳ್ಳಿಗೆ ಉಚ್ಚೆ ಹುಯ್ಯಿ ಅಂದ್ರೆ

ಜಲಮಲ ಕಟ್ಟಿ ಆರು ತಿಂಗಳಾಯ್ತು.

ಎಂಬ ಗಾದೆ ಅತ್ಯುಕ್ತಿ ಅಥವಾ ಉತ್ರೇಕ್ಷಾಲಂಕಾರಕ್ಕೆ ಉದಾಹರಣೆಯಗುತ್ತದೆ. ಇಂಥ ಅತ್ಯುಕ್ತಿಯನ್ನು ಗಾದೆಯಲ್ಲಿ ಅಪಾರವಾಗಿ ಕಾಣುತ್ತೇವೆ. ಇಲ್ಲಿ ಒಬ್ಬ ಜಿಪುಣನ ಜಿನ ಬುದ್ದಿಯನ್ನು ಕಾಣುತ್ತೇವೆ. ತನ್ನಲ್ಲಿರುವ ಏನೊಂದನ್ನೂ ನೀಡದ ಜಿಪುಣನಿಗೆ ಕೀತ ಬೆಳಿಗೆ ಉಚ್ಚೆ ಹುಯ್ಯಿ ಎಂದು ಕೇಳಿದಾಗ ಅವನು. ಅದರಲ್ಲೂ ತನ್ನ ಜಿನ ಬುದ್ದಿಯನ್ನು ತೋರಿಸುತ್ತಾನೆ. ಆದರೆ ಆರು ತಿಂಗಳವರೆಗೆ ಜಲಮಲ ಕಟ್ಟಿದರೆ ಪ್ರಾಣಕ್ಕೆ ಸಂಚಕಾರ ಬಂದು ಸಾಯುತ್ತಾನೆ. 'ಆಳು ಬಂದ್ರೆ ನಿಂತಾನು, ಅರಸು ಬಂದ್ರೆ

ನಿಂತಾನು, ಹೇಲು ಉಚ್ಚೆ ಬಂದ್ರೆ ನಿಂತಾರ ಹುಚ್ಚೆದೊರೆ?' ಎಂಬ ಗಾದೆಯಂತೆ. ಇವನ್ನು ತಡೆದು ನಿಲ್ಲಿಸಲು ಸಾಧ್ಯವಿಲ್ಲ. ಆದರೂ ಈತ ಕೊಡಲಾರದ ಕೃಪಣತೆಯಿಂದ ಈ ರೀತಿ ಹೇಳಿದ್ದಾನೆ ಎಂಬುದನ್ನು ಈ ಗಾದೆಯು ತಿಳಿಸುತ್ತದೆ. ಆದುದರಿಂದ ಅತ್ಯುಕ್ತಿ ಅಲಂಕಾರವಾಗಿದೆ. ಇದರ ಉದ್ದೇಶವಿಷ್ಟೆ ಹೇಳುವ ವಿಷಯ ಚುರುಕಾಗಿ ಮುಟ್ಟಲಿ ಎಂದು: ಇಂಗಿತ ಭಾವ ಹರಿತವಾಗಿ ಮನಸ್ಸಿಗೆ ನಾಟಲಿ ಎಂಬುದೇ ಆಗಿದೆ.

ಕೂತು ಮಲಗಬೇಕು.

ಈ ಗಾದೆಯು ನೀತಿಯೊಂದನ್ನು ತಿಳಿಸುತ್ತದೆ. ಗಾದೆಗಳು ಸಾಮಾನ್ಯವಾಗಿ ಹಲವಾರು ನೀತಿಗಳನ್ನು ತಿಳಿಸುತ್ತವೆ. ಸಾಮಾನ್ಯವಾಗಿ ಗಾದೆಗಳು ಅನುಭವದ ನೆಲೆಯಲ್ಲಿ ಹುಟ್ಟಿದವು. ಜೀವನದ ಪ್ರತಿಯೊಂದು ಅನುಭವವನ್ನು ಪಡೆದ ವ್ಯಕ್ತಿ ಇಂಥ ನೀತಿಯ ನೆಲೆಗಟ್ಟಿನ ಗಾದೆಯನ್ನು ರಚಿಸಿದ್ದಾನೆ. ಕೂತು ಮಲಗಬೇಕು ಎಂಬುದು ಕೂಡ ನೀತಿಯನ್ನು ತಿಳಿಸುತ್ತದೆ. ನಿಂತಿದ್ದವನು ಮಲಗಬೇಕು ಎಂದರೆ ಅವನು ಮೊದಲು ಕುಳಿತುಕೊಳ್ಳಬೇಕು. ಅನಂತರ ಮಲಗಬೇಕು. ಆಗ ಯಾವುದೇ ತೊಂದರೆ ಇಲ್ಲ. ಅದನ್ನು ಬಿಟ್ಟು ಮಲಗಬೇಕು ಎನಿಸಿ ನಿದ್ರೆ ಬಂದರೆ ನಿಂತಿದ್ದವನು ಹಾಗೆಯೇ ಬಿದ್ದರೆ ಕೈ ಕಾಲು ಮುರಿದು, ತಲೆ ಒಡೆದು ರಕ್ತ ಬರುತ್ತದೆ. ಅಪಾರವಾದ ನೋವನ್ನು ಅನುಭವಿಸುವುದಲ್ಲದೆ ಹಣ, ಶ್ರಮ, ಕಾಲ, ಎಲ್ಲ ವ್ಯರ್ಥ. ಮುರಿದ ಕೈ ಕಾಲು, ಒಡೆದ ತಲೆ ಸರಿಯಾದರೆ ಸರಿ, ಇಲ್ಲದಿದ್ದರೆ ಜೀವನ ಪರ್ಯಂತ ಅಂಗವಿಕಲನಾಗಿ ಬೇರೊಬ್ಬರ ಆಶ್ರಯದಲ್ಲಿ ಜೀವನ ಸಾಗಿಸಬೇಕಾಗುತ್ತದೆ. ಇದು ಗಾದೆಯಲ್ಲಿ ಅಡಗಿರುವ ವಾಚಾರ್ಥ ಆದರೆ ಈ ಗಾದೆಯು ಇಷ್ಟಕ್ಕೇ ನಿಲ್ಲದೆ ಬೇರೊಂದು ಅರ್ಥ ಪ್ರತೀತಿಯನ್ನು ಅಂದರೆ ಸೂಚ್ಯಾರ್ಥವನ್ನು ತೆರೆದಿಡುತ್ತದೆ. ಯಾವುದೇ ಒಂದು ಕೆಲಸವನ್ನು ಮಾಡಬೇಕಾದರೆ ಅಥವಾ ಯಾವುದಾದರು ಒಂದನ್ನು ಪಡೆಯಬೇಕಾದರೆ ಅದಕ್ಕಾಗಿ ಹಂತ ಹಂತವಾಗಿ ಶ್ರಮಿಸಬೇಕು. ಅನಂತರ ಯಶಸ್ಸು ತನಗೆ ತಾನೇ ಒಲಿದು ಬರುತ್ತದೆ. ಅದನ್ನು ಬಿಟ್ಟು ಬೇರೆ ಮಾರ್ಗದ ಮೂಲಕ ಬೇಗ ಪಡೆಯಲು ಪ್ರಯತ್ನಿಸಿದರೆ ಅಪಾಯ ಕಾದಿರುತ್ತದೆ. ಇವೇ ಮುಂತಾದ ಅಂಶಗಳನ್ನು ಈ ಗಾದೆಯು ಹೊಂದಿದೆ.

ಕೇವಲ ಒಂದು ಚಿಕ್ಕಗಾದೆ ಇಷ್ಟೆಲ್ಲಾ ಅರ್ಥ ಪ್ರತೀತಿಯನ್ನು ಹೊಂದಿದೆ. ಈ ಗಾದೆಯು ಕನ್ನಡಿಯಲ್ಲಿ ಕರಿಯನ್ನು ಹಿಡಿಯುವ, ಕಿರಿದರಲ್ಲಿ ಪಿರಿದಾದ ಅರ್ಥವನ್ನು ಹೊಂದಿದೆ. ಅಲ್ಲದೆ ತನ್ನದೇ ಆದ ಸಾಹಿತ್ಯಿಕಾಂಶವನ್ನು ಪಡೆದಿದೆ.

ಕೊತ್ತಿ ಕೊಂದ ಪಾಪ

ತಿತ್ತಿ ಹೊಕ್ಕರೂ ಬಿಡದು

ಈ ಗಾದೆಯಲ್ಲಿ ನಂಬಿಕೆಯ ಜೊತೆಗೆ ಭಾಷಾ ವಿಜ್ಞಾನದ ಅಧ್ಯಯನ ಅವಶ್ಯಕವಾಗಿದೆ. ಕೊತ್ತಿ ಕೊಲ್ಲುವುದು ಮಹಾಪಾಪ ಎಂಬ ನಂಬಿಕೆ ಜನಪದರಲ್ಲಿ ಪ್ರಬಲವಾಗುಂಟು. ನಂಬಿಕೆ, ಕುರುಡ ನಂಬಿಕೆ ಮಾನವ ಸ್ವಭಾವ ಇತ್ಯಾದಿಗಳ ದೃಷ್ಟಿಯಿಂದ ಗಾದೆಗಳನ್ನು ಅಧ್ಯಯನ ಮಾಡಲು ಅವಕಾಶವಿದೆ.

ಇಲ್ಲಿ ಬಂದಿರುವ ತಿತ್ತಿ ಎಂಬ ಶಬ್ದ ಭಾಷಾ ಶಾಸ್ತ್ರಜ್ಞನಿಗೆ ತಲೆ ಕೆರೆದು ಕೊಳ್ಳುವಂತೆ ಮಾಡುತ್ತದೆ. ಹೆಂಡ ತುಂಬುವ ಚರ್ಮದ ಚೀಲಕ್ಕೆ ತಿತ್ತಿ ಎಂಬ ಹೆಸರುಂಟು. ಆದರೆ ಆ ಅರ್ಥ ಇಲ್ಲಿ ಅನನ್ವಯ. ಇದು ತಿರುಪತಿ ಎಂಬ ಶಬ್ದದಿಂದ ರೂಪಗೊಂಡದ್ದು. ತಿರುಪತಿ ಪುಣ್ಯ ಕ್ಷೇತ್ರ: ಅದರ ಸಂದರ್ಶನ, ಸಂಸ್ಪರ್ಶನದಿಂದ ಪಾಪ ಪರಿಹಾರವಾಗುತ್ತದೆಂದು ಜನ ಸಾಮಾನ್ಯರಿಗೆ ನಂಬಿಕೆ, ಅಂಥ ಪಾಪ ಪರಿಹಾರಕ ಪುಣ್ಯಕ್ಷೇತ್ರವಾದ ತಿರುಪತಿಗೆ ಹೋಗಿ ಬಂದರೂ ಬೆಕ್ಕನ್ನು ಕೊಂದ ಪಾಪ ಹೋಗುವುದಿಲ್ಲ ಎಂಬುದೇ ಇಲ್ಲಿ ಉದ್ದೇಶಿತ ಭಾವ. ಆದ್ದರಿಂದ ತಿತ್ತಿ ಶಬ್ದಕ್ಕಿರುವ ಹೆಂಡ ಎನ್ನುವ ಅರ್ಥ ಇಲ್ಲಿ ಅನ್ವಯವಾಗುವುದಿಲ್ಲ. ತಿರುಪ್ತಿ ತಿರುಪ್ತಿ ತಿರ್ಪ್ತಿ ತಿರ್ತಿ ತಿತ್ತಿ ಆಗಿರಬಹುದೆಂದು ತೋರುತ್ತದೆ. ಇಂಥ ಅನೇಕ ಸುಂಕು ಮುರಿಯದ ಶಬ್ದಗಳು ಗಾದೆಗಳಲ್ಲಿ ಹೇರಳವಾಗಿ ಕಂಡುಬರುತ್ತವೆ.

ಕೋಗಿಲೆಯಂಥದೂ ಕಾಲ ಬಂದ್ವಂಗೆ

ಕಾಗೆ ಗೂಡಿನಲ್ಲಿ ಕತೆ ಹಾಕ್ತದೆ.

ಕೋಗಿಲೆ ತನ್ನ ಕಂಠದಿಂದ ಪ್ರಸಿದ್ಧಿಯನ್ನು ಪಡೆದಿರುವ ಪಕ್ಷಿ, ಆದಕಾರಣ ಅದಕ್ಕೆ ತನ್ನದೇ ಆದ ಸ್ಥಾನ ಮಾನಗಳು ಇವೆ. ಅದಕ್ಕೆ ಅದರದೇ ಆದ ಬಳಗ ಇದ್ದು ವಾಸಕ್ಕಾಗಿ ತನ್ನದೇ ಸ್ಥಾನವನ್ನು ಮಾಡಿಕೊಂಡಿರುತ್ತದೆ. ಆದರೆ ಇದು ಮೊಟ್ಟೆಯನ್ನು ಮಾತ್ರ ಕಾಗೆ ಗೂಡಿನಲ್ಲಿ ಇಡುತ್ತದೆ. ಏಕೆಂದರೆ ತಾನೇ ಕಾವು ಕೂತು ಮರಿ ಮಾಡುವ ಸಾಮರ್ಥ್ಯ ಇಲ್ಲದ್ದರಿಂದ. ಕಾಗೆ ಗೂಡಿನಲ್ಲಿ ಇಟ್ಟ ಮೊಟ್ಟೆಗೆ ಕಾಗೆ ಕಾವು ಕೂತು ಮರಿಗಳನ್ನಾಗಿ ಮಾಡುತ್ತದೆ. ಆಹಾರ ಒದಗಿಸಿ ಬೆಳೆಸುತ್ತದೆ. ರೆಕ್ಕೆ ಬಲಿತ ಮೇಲೆ ಮರಿ ಕೋಗಿಲೆ ತನ್ನ ಪರಿವಾರವನ್ನು ಹುಡುಕಿ ಸೇರುತ್ತದೆ. ಕಾಗೆ ಗೂಡಿನಲ್ಲಿ ಕೋಗಿಲೆಯಂತದೂ ಕಾಲ ತಳ್ಳಬೇಕಾದರೆ ಅದು ಕಾಲದ ಮಹಿಮೆ. ಹಾಗೆಯೇ ದೊಡ್ಡ ಉತ್ತಮ ವ್ಯಕ್ತಿ ಎನಿಸಿಕೊಂಡವನು ಕಾಲದ ಪರಿಸ್ಥಿತಿಯ ಒತ್ತಡದಿಂದ ತನ್ನ ಹಿರಿಮೆಗೆ ತಕ್ಕದ್ದಲ್ಲದ ಸ್ಥಿತಿಯನ್ನು ಅನುಭವಿಸಬೇಕಾಗುತ್ತವೆ. ಕಾಲ ಕಳೆಯಬೇಕಾಗುತ್ತದೆ. ಅದೆಲ್ಲವೂ ಕಾಲದ ಮಹಿಮೆ. ಇಷ್ಟೆಲ್ಲ ಅರ್ಥಗಳನ್ನು ಈ ಗಾದೆಯು ಹೊಂದಿದೆ. ಅಲ್ಲದೆ ಈ ಗಾದೆಯಲ್ಲಿ ಅನುಪ್ರಾಸವಿರುವುದನ್ನು ಗಮನಿಸಬಹುದು. 'ಕೋಗಿಲೆ' 'ಕಾಲ' 'ಕಾಗೆ' 'ಕತೆ' ಎಂಬಲ್ಲಿ 'ಕ' ಕಾರದ ಅನುಪ್ರಾಸವಿದೆ.

ಕುಯ್ಯಾನ ಅಂದ್ರೆ ಮೊಟ್ಟೆಕೋಳಿ

ತರಾನ ಅಂದ್ರೆ ದುಡ್ಡಿಲ್ಲ

ಇವನೆಲ್ಲಿ ಒಕ್ಕರಿಸಿದ ಹೊಸನೆಂಟ ಅಂದದ್ಕೆ

ತಂಗಳಿಗಿರೋನಲ್ಲ ಬಿಸಿ ಉಂಣ್ಣೊನಲ್ಲ

ಸ್ವಾಮಾರ ಸ್ವಾಮಿ ಸ್ಯಾವೆ ಬಾರಮ್ಮಣ್ಣಿ

ಹಸಿರಾಗಿ ಹೊಸ ಕಲ್ಲೂಗಟ

ಇವನ್ಯಾರವ ಹೊಸನೆಂಟ ಅಂತ ಪಲುಕಿದ್ರೆ

ಇಲ್ಲೆ ಎಣ್ಣೆಗೆರಲಕ್ಕೇನಳ್ಳಿ

ವಸೊಸಿ ಇಕ್ಕೊಂಡು ಮಸೆಯಮ್ಮಣ್ಣಿ ಅಂತ

ಮುಲುಕ್ತಾ ಕೊತ್ನಂತೆ

ಕಲಾತ್ಮಕ ಅಭಿವ್ಯಕ್ತಿಯ ಕಾವ್ಯಗುಣ ಮತ್ತು ಚುರುಕು ಮುಟ್ಟಿಸುವ ವ್ಯಂಗ್ಯದ ಮಾನಚು ಈ ಗಾದೆಗಳಲ್ಲಿ ಅಡಗಿರುವುದನ್ನು ಪರಿಭಾವಿಸಬೇಕು. ಮೊದಲನೆಯ ಗಾದೆಯಲ್ಲಿ ಇದ್ದಕ್ಕಿದ್ದಂತೆ ವಕ್ಕರಿಸಿದ ಹೊಸನೆಂಟನನ್ನು ಕಂಡ ಗೃಹಿಣಿ ಸಿಡುಕನಿಂದ "ಕುಯ್ಯಾನ ಅಂದ್ರೆ ಮೊಟ್ಟೆಕೋಳಿ, ತರಾನ ಅಂದ್ರೆ ದುಡ್ಡಿಲ್ಲ. ಇವನೆಲ್ಲಿ ವಕ್ಕರಿಸಿದ ಹೊಸನೆಂಟ?" ಎಂದು ಲೋಟಕಿಕೊಳ್ಳುತ್ತಾಳೆ. ಅವಳ ಲೊಟಕನ್ನು ಕೇಳಿಸಿಕೊಂಡು ಹೊಸನೆಂಟ – ಅವಳು ಸುವ್ವಿ ಎನ್ನುವಾಗಲೇ ರಾಗ ಯಾವುದೆಂದು ಅರ್ಥ ಮಾಡಿಕೊಂಡು. ಸೇರಿಗೆ ಸವಾಸೇರಾಗಿ ಕುಟುಕುತ್ತಾನೆ. "ತಂಗಳಿಗಿರೋನಲ್ಲ, ಬಿಸಿ ಉಣ್ಣೋನಲ್ಲ, ಸ್ವಾಮಾರ ಸ್ವಾಮಿ ಸ್ಯಾವೆ ಬಾರಮ್ಮಣ್ಣಿ" ಆ ಉತ್ತರದಲ್ಲಿರುವ ಪರಿಣಾಮ ತೀವ್ರತೆ ಹಾಗೂ ಮಡುಗಟ್ಟಿರುವ ವ್ಯಂಗ್ಯಸಾಂದ್ರತೆಯಿಂದ ಗಾದೆ ಉತ್ತಮ ಕಾವ್ಯ ಮಟ್ಟಕ್ಕೆರಿದೆ. ಉತ್ತರದ ಹೊರ ಆಕಾರದಲ್ಲಿ ಹಗೆಯೂ ಮೆಚ್ಚುವ ಸೌಮ್ಯತೆ ಎದ್ದು ಕಾಣುವಂತಿದ್ದರೂ ಅರ್ಥದ ಒಳ ಪ್ರಾಕಾರದಲ್ಲಿ ಚುಚ್ಚುವ ವ್ಯಂಗ್ಯದ ಭರ್ಜಿ ಭರ್ಜರಿಯಾಗಿದೆ. "ತಂಗಳಿಗಿರೋನಲ್ಲ, ಬಿಸಿ ಉಣ್ಣೋನಲ್ಲ" ಎಂದು ನಯದ ಸೌಜನ್ಯದ ಸೂಜಿ ಮೊನೆಯಿಂದ ಚುಚ್ಚಿ "ಸ್ವಾಮಾರ ಸ್ವಾಮಿ ಸ್ಯಾವೆ ಬಾರಮ್ಮಣ್ಣಿ" ಎಂದು ವ್ಯಂಗ್ಯದ ಭರ್ಜಿ ಮೊನೆಯಿಂದ ಒಡಲಾಳಕ್ಕೆ ಚುಚ್ಚಿ ಕಳ್ಳು ಈಚೆಗೆ ಬರುವಂತೆ ಎಳೆಯುತ್ತಾನೆ. ಹಳ್ಳಿಗಾಡಿನಲ್ಲಿ ತಿರುಪತಿ ಯಾತ್ರೆ ಮುಡಿ

ಬಂದು ಹರಿಗೆ ಪೂಜಿಸಿ, ಅದಕ್ಕಾಗಿಯೇ ಬಿಟ್ಟು ಮೇಯಿಸಿದ್ದ ಹತ್ತಾರು ಮರಿಗಳನ್ನು ಕಡಿದು ಸುತ್ತಮುತ್ತಲ ಹಳ್ಳಿ ಜನಕ್ಕೆಲ್ಲ ಅನ್ನ ಹಾಕಿಸುತ್ತಾರೆ. ಅದಕ್ಕೆ 'ಸ್ವಾಮಿ ಸ್ಯಾವೆ' ಎನ್ನುತ್ತಾರೆ ಅಂಥ ಸ್ವಾಮಿ ಸ್ಯಾವೆಗೆ ಕರೆ ಕೊಡಲು ಬಂದವನು. ನಿಮ್ಮ ಮನೆಯ ಊಟಕ್ಕೆ ಬಂದವನಲ್ಲ ಎಂಬ ಘಾಟು ಅವನ ಉತ್ತರದಲ್ಲಿದೆ: ಸಾಮಾನ್ಯವಾಗಿ ಗ್ರಾಮಾಂತರ ಪ್ರದೇಶದಲ್ಲಿ ಎಲ್ಲ ಕಡೆ ಸೋಮವಾರ ಮಾಂಸ ತಿನುವುದಿಲ್ಲ. ಆಯಾಯ ದೇವರುಗಳು ಹೆಸರುಗಳಲ್ಲಿ ನಿರ್ದಿಷ್ಟ ದಿವಸ ಮಾಂಸ ತಿನ್ನದಿರುವ ಹಾಗೆಯೇ ಸಾಮಾನ್ಯವಾಗಿ ಸೋಮವಾರವೂ ಮಾಂಸ ತಿನ್ನುವುದಿಲ್ಲ. ಹೀಗಿರುವಾಗ ಅವನು ಮನೆಯಾಕೆಗೆ ಕೊಡುವ ಕರೆ. "ಸ್ವಾಮಾರ ಸ್ವಾಮಿ ಸ್ಯಾವೆ ಬಾರಮ್ಮಣ್ಣಿ" ಬಂದು ಮುಖಕ್ಕೆ ಸಗಣಿ ನೀರು ಹಾಕಿಸಿಕೊಂಡು ಹೋಗಮ್ಮಣ್ಣಿ ಎಂಬ ವ್ಯಂಗ್ಯದ ಇರಿತವಿದೆ.

ಎರಡನೆಯ ಗಾದೆಯಲ್ಲಿ ಅನಿರೀಕ್ಷಿತವಾಗಿ ಹೊಸನೆಂಟನ್ನು ಕಂಡ ಗೃಹಿಣಿ ರಾಗಿ ಬೀಸುತ್ತಿದ್ದವಳು ಬೀಸುವ ಹಾಡಿನ ಧಾಟಿಯಲ್ಲಿಯೇ ತನ್ನ ಅಸಮಾಧಾನವನ್ನು ಪಲುಕುತ್ತಾಳೆ.

"ಹಸಿರಾಗಿ ಹೊಸ ಕಲ್ಲೂಗಿಟ ಇವನ್ಯಾರವ್ವ ಹೊಸ ನೆಂಟ?" ಎಂದು ಇದನ್ನು ಕೇಳಿಸಿಕೊಂಡ ಹಾಗೂ ಅರ್ಥಮಾಡಿಕೊಂಡ ಆ ಹೊಸ ಮುದಿನೆಂಟ ಅವಳ 'ಹೋಗು ಅನ್ನಲಾರದೆ ಹೊಗೆ ಇಕ್ಕಿದರು' ಎಂಬ ತಂತ್ರದ ಗುನುಗು. ಹಾಡಿಗೆ ಕಿಂಚಿತ್ತೂ ಜಗ್ಗದೆ "ವಸೊಸಿ ಇಕ್ಕೊಂಡು ಮಸೆಯಮ್ಮಣ್ಣಿ" ಎಂದು ಹೇಳಿ ಮುಲುಕುತ್ತಾ ಕೂತನಂತೆ. ಮುಲುಕುತ್ತಾ ಎಂದರೆ ಬಾಯಿಂದ ಅಪ್ಪಪ್ಪ ಎಂತಲೋ ಅಮ್ಮಮ್ಮ ಎಂತಲೋ ಶಿವಶಿವ ಎಂತಲೋ ರಾಮರಾಮ ಎಂತಲೋ ಹೇಳತ್ತಾ ವೃದ್ಧಾಪ್ಯದ ಅಶಕ್ತತೆಯನ್ನೂ ಹಾಗೂ ಮುರ್ಗಾಯಾಸವನ್ನೂ ಸೂಚಿಸುವುದು. ಹಾಗೆ ಸೂಚಿಸುತ್ತಲೇ ಕೂಡುವುದು ಅವನು ಎಚಿಥ ಭಂಡ ಎಂಬುದನ್ನು ಬಹಿರಂಗಗೊಳಿಸುತ್ತದೆ. ಅಂಡೂರುವ ಮೊದಲೇ ಕುಂಯ್ ಎನ್ನುವ ಹಾಗೆ ಕುಂಡಿಯ ಮೇಲೆ ಬಡಿದು ಓಡಿಸಬೇಕೆಂದು 'ಬೀಸುವ ಹಾಡಿನ' ಚಾಟಿ ಏಟು ಹಾಡಿದಂಥೆ ಅವಳಿಗೆ, ಆ ಮುದಿನೆಂಟ ಜಂ ಎನ್ನದೆ ಜಪ್ಪಯ್ಯ ಎನ್ನದೆ ದಾಸಯ್ಯನ ಊರುಗೋಲಿಗೆ ಜಾಗ ಕೊಟ್ರೆ ಜಂಗಟೆ ಬವನಾಸಿ ಬಾಕಿ ಎಲ್ಲ ಇಳಿಸ್ಕೊಂಡು ಕೂತ್ಕೊಂಡ" ಎಂಬ ಗಾದೆಯಂತೆ 'ನೀನು ಏನು ಲಾಗ ಹಾಕಿದ್ರೂ ನನ್ನ ಜಾಗ ಇಲ್ಲೆ' ಎನ್ನುವಂತೆ 'ಮುಲುಕ್ತಾ' ಕೂತು ಬಿಟ್ಟನಂತೆ, ಅವಳ 'ಪಲುಕು' ಇವನ ಮುಲುಕು ಕ್ರಮವಾಗಿ ಯುಕ್ತಿಯನ್ನೂ ಭಂಡತನವನ್ನೂ ಬಯಲು ಮಾಡುವುದರಲ್ಲಿ ಪ್ರಧಾನ ಪಾತ್ರ ವಹಿಸುತ್ತವೆ. ಇಂಥ ಕಾವ್ಯಶಕ್ತಿಯುಳ್ಳ ಎರಡು ಸುಂದರ ಗಾದೆಗಳು ಇವು.

ಗಂಧಕಾರ ಗೌಡನ ಸೊಸೆಗೆ ಬಿದಿರು ಕಡ್ಡಿ ಮೂಗುತಿ

ಬಡಗಿ ಮನೆ ಸಟ್ಟುಗ ತೂತು

ಮೇಲಿನ ಎರಡು ಗಾದೆಗಳು ಅಸಂಗತ ವಿಷಯಗಳನ್ನು ತಿಳಿಸುತ್ತವೆ. ಮೊದಲನೆಯದು ಗಂಧಕಾರ ಅಂದರೆ ಗಂದದ ಕಲಾಕೃತಿಯನ್ನು ಮಾಡುವ, ಮಾಡಿ ಊರಿನ ಜನರೆಲ್ಲರಿಗೂ ನೀಡುವ ಆ ಗೌಡನ ಸೊಸೆಯ ಮೂಗಿಗೆ ಬಂಗಾರದ ಮೂಗುತಿ ಇಲ್ಲ ಬಂಗಾರ ಇಲ್ಲದಿದ್ದರೂ ಅದು ಅಧಿಕ ಬೆಲೆಯುಳ್ಳದ್ದು – ಗಂಧದ ಮೂಗುತಿಯಾಗದರೂ ಇಲ್ಲ. ಆಕೆ ಧರಿಸಿರುವುದು ಬಿದಿರು ಕಡ್ಡಿಯ ಮೂಗುತಿ. ಹಾಗೆಯೇ ಬಡಗಿ ಅಂದರೆ ಊರಿನ ಜನರಿಗೆ ಹೊಸ ಪಾತ್ರೆಗಳನ್ನು ಮಾಡಿಕೊಡುವವನು. ಹಾಗೂ ಸಟ್ಟುಗಗಳನ್ನು ಮಾಡಿಕೊಡುವವನು. ಆದರೆ ಅವನ ಮನೆಯ ಸಟ್ಟುಗವೇ ತೂತಾಗಿದೆ. ಹೊಸದನ್ನು ಮಾಡಿಕೊಂಡಿಲ್ಲ. ಈ ಎರಡೂ ಗಾದೆಗಳಲ್ಲೂ ತಮ್ಮ ವೃತ್ತಿ ಅಧಿಕವಾಗಿದ್ದರೂ ಅವರ ಪರಿಸ್ಥಿತಿ ಅಧಃ ಪತನದ ಸ್ಥಾನದಲ್ಲಿರುವುದನ್ನು ತಿಳಿಸುತ್ತದೆ. ಈ ಗಾದೆಗಳು ಅಸಂಗತ ವಿಷಯದ ಮುಖಾಂತರ ಇಂಗಿತ ಭಾವವನ್ನು ಅನಿರೀಕ್ಷಿತವಾಗಿ ಅಂದರೆ ಅಸದೃಶವಾಗಿ ಬೆತ್ತಲೆಗೊಳಿಸುತ್ತವೆ.

ಗುಟ್ಟಿರಲಿ ಗುಮಾನಿರಲಿ

ಗುಡ್ಲಾಗಿಷ್ಟು ಜಾಗಿರಲಿ

ಸುಟ್ಟೋವು ಮೂರು ರೊಟ್ಟಿರಲಿ

"ಕೈಯಲ್ಲೊಂದು ಪುಸ್ತಕವಿದ್ದು, ಕುಡಿಯಲು ಮದ್ಯವಿದ್ದು, ಪಕ್ಕದಲ್ಲಿ ಪ್ರಿಯತಮೆ ಇದ್ದರೆ ಸ್ವರ್ಗ ಯಾರಿಗೆ ಬೇಕು? ಎಂಬ ಅರ್ಥದ ಉಮರ ಖಯಾಮ್ ಕವಿಯ ಮನೋಧರ್ಮವನ್ನೆ ಈ ಸಹಜ ಸುಂದರ ಗಾದೆ ಭಿನ್ನ ಆವರಣದ ಮೂಲಕ ಪಡೆದಿದೆ. ಎಂದರೆ ತಪ್ಪಾಗುವುದಿಲ್ಲ"[೧]. ಇದೇ ಅರ್ಥದ ಸರ್ವಜ್ಞನ ವಚನವನ್ನು ಇಲ್ಲಿ ನೆನೆಯಬಹುದು.

ಬೆಚ್ಚನಾ ಮನೆಯಾಗೆ ವೆಚ್ಚಕ್ಕೆ ಹೊನ್ನಾಗಿ

ಇಚ್ಚೆಯನರಿತ ಸತಿಯಿರೆ

ಸ್ವರ್ಗಕ್ಕೆ ಕಿಚ್ಚು ಹಚ್ಚೆಂದ ಸರ್ವಜ್ಞ

ದುರಾಸೆ ಇಲ್ಲದೆ ಇದ್ದುದರಲ್ಲಿ ಸಂತೃಪ್ತಿಗೊಳ್ಳುವ ಜನಸಾಮಾನ್ಯರ ಬದುಕಿನ ಮನೋಧರ್ಮ ಮಗ್ಗಲು ಪಡೆದಿದೆ ಈ ಗಾದೆಯಲ್ಲಿ. ಇಲ್ಲಿ ಬಳಕೆಯಾಗಿರುವ ಒಂದೊಂದು ಮಾತೂ ಅರ್ಥಪೂರ್ಣ: ಅನುಭವ ಜನ್ಯ. ಬದುಕಿನಲ್ಲಿ ನೂರು ಸಂಕಷ್ಟಗಳು ಬರಲಿ; ಅಭಾವ ಅಡ್ಡಾದಿಡ್ಡಿ ಕಿತ್ತು ತಿನ್ನಲಿ. ಸಂಸಾರದ ಗುಟ್ಟನ್ನು ಬೇರೆಯವರಿಗೆ ಬಿಟ್ಟು ಕೊಡಬಾರದು ಎಂಬ ಭಾವ 'ಗುಟ್ಟಿರಲಿ' ಎಂಬ ಮಾತಿನಲ್ಲಿದೆ.

---

೧. ಸುಧಾಕರ, ಜಾನಪದ ಮತ್ತು ಕಲಚಿರಕೆತನ, ಪು.ಸಂ. ೬೩.

ವ್ಯವಹಾರ ಜ್ಞಾನ ಮರುನುಡಿಯಲ್ಲೆ ವಿವೇಕ ಹೇಳುತ್ತದೆ. ಮುಗ್ದತೆಯಿಂದ ಎಲ್ಲರನ್ನೂ ಎಲ್ಲವನ್ನೂ ನಂಬಬಾರದು, ಕೆಲವರನ್ನು ಕೆಲವನ್ನು ಅನುಮಾನದಿಂದ ನೋಡಬೇಕಾದ ದೂರವಿರಿಸಬೇಕಾದ ಅಗತ್ಯವಿದೆ ಎಂಬ ಭಾವ 'ಗುಮಾನಿರಲಿ' ಎಂಬ ಮಾತಿನಲ್ಲಿದೆ. ಇವೆರಡು ಗುಣಗಳನ್ನು ಕಟ್ಟುನಿಟ್ಟಾಗಿ ಸಂಸಾರದಲ್ಲಿ ಅಳವಡಿಸಿಕೊಂಡರೆ ಅರಮನೆಯೇ ಬೇಕಾಗಿಲ್ಲ, ಗುಡಿಸಲಲ್ಲಿದ್ದರೂ ನಲಿವು ನೆಮ್ಮದಿ ಸಿಕ್ಕುತ್ತದೆ ಎಂಬ ಭಾವ ಕನಿಷ್ಟ ಅಗತ್ಯ ಸೂಚಕ 'ಗುಡ್ಲಾಗಿಷ್ಟು ಜಾಗಿರಲಿ' ಎಂಬ ಮಾತು ಸೂಚಿಸುತ್ತದೆ. ಪರಸ್ಪರ ಹೊಂದಾಣಿಕೆ ಮಾನಸಿಕ ನೆಮ್ಮದಿ ತುಳುಕಾಡುವಾಗ ಭಕ್ಷಭೋಜ್ಯವೇ ಬೇಕಾಗಿಲ್ಲ. ಕನಿಷ್ಟ ಕಸವೂ ಗರಿಷ್ಟ ರಸದ ರುಚಿಯನ್ನು ಸಂತೃಪ್ತಿಯನ್ನು ನೀಡುತ್ತದೆ ಎಂಬ ಭಾವ 'ಸುಟ್ಟೋವು ಮೂರು ರೊಟ್ಟಿರಲಿ' ಎಂಬ ಮಾತಿನಲ್ಲಿದೆ. ಹೀಗೆ ಒಂದೊಂದು ಶಬ್ದವೂ ಒಂದೊಂದು ಸಾಲೂ ಜೀವನಾನುಭವದ ಮಾತಿನಲ್ಲಿದೆ. ಹೀಗೆ ಒಂದೊಂದು ಶಬ್ದವೂ ಒಂದೊಂದು ಸಾಲೂ ಜೀವನಾನುಭವದ ಜೀವ ಸೆಲೆಯಾಗಿ ಜಿನುಗುತ್ತಾ, ಬಿಸಿಗೊಂಡ ಬೆಣ್ಣೆಯಂತೆ ಕನುಗುತ್ತಾ, ಗಾಂದೆಯ ಒಟ್ಟಂದದ ಧೋರಣೆಯೊಳಗೆ ಸಂಪೂರ್ಣ ನುಗುತ್ತಾ ಕೊನೆಯಲ್ಲಿ ಮಿರಿ ಮಿರಿ ಮಿನುಗುತ್ತಾ ಕಲಾತ್ಮಕವಾಗಿ ಕೋರುಕೊಂಡಿರುವ ಶಬ್ದಮೋಡಿ ಮೆಲುಕು ಹಾಕುವಂಥದು: ಇಂಥ ನಿರಾಡಂಬರ ಶಬ್ದ ಮೋಡಿಯಲ್ಲಿ ಜನಪದರ ಬದುಕಿನ ಮನೋಧರ್ಮ ಗರಣೆಗೊಂಡು ಮೊಸರಾಗಿ, ಹೆತ್ತುಕೊಂಡ ತುಪ್ಪವಾಗಿ ಮೂಡಿ ನಿಂತಿರುವುದು ಎಂಥವರ ಬಾಯಲ್ಲೂ ನೀರೂರಿಸುತ್ತದೆ.

ಚರ್ಮ ತೊಳೆದರೆ ಕರ್ಮ ಹೋಗ್ತದ?

ಈ ಗಾದೆಯಲ್ಲಿ ಒಳ ಪ್ರಾಸವಿರುವುದನ್ನು ಗುರುತಿಸಬಹುದು. ಚರ್ಮ ಕರ್ಮ ಎಂಬ ಪದಗಳಲ್ಲಿ ಒಂದೇ ಧ್ವನಿ ಪುನರ್ ಘಟಿತವಾಗಿರುವುದನ್ನಿಲ್ಲಿ ಕಾಣಬಹುದು. ಅಲ್ಲದೆ

ಜರ್ಮ ತೋಳೆದರೆ

ಕರ್ಮ ಹೋಗ್ತದ?

ಎಂಬುದಾಗಿ ಎರಡು ಸಾಲು ಮಾಡಿದರೆ ಆದಿ ಪ್ರಾಸಬರುವುದನ್ನು ಕಾಣಬಹುದು. ಹಾಗೆಯೇ ಈ ಗಾದೆಯು ವಿಡಂಬನೆಯನ್ನು ತಿಳಿಸುತ್ತದೆ. ಚರ್ಮ ಇದು ದೇಹವನ್ನು ಮುಚ್ಚಿರುವ ಹೊರಭಾಗ ಆದುದರಿಂದ ಆ ಜರ್ಮವನ್ನು ತೋಳೆದರೆ ಕರ್ಮ ಹೋಗುವುದಿಲ್ಲ ಕರ್ಮ ಎಂಬುದು ದೇಹದ ಒಳಭಾಗ ಮನಸ್ಸಿಗೆ ಸಂಬಂಧಿಸಿದ್ದು.

ಪಾಪಿಯಾದವನು ಮಾಡಬಾರದ ಹಲವಾರು ಪಾಪಗಳನ್ನು ಮಾಡಿ ಕರ್ಮವನ್ನು ಹೊಂದಿ ದೇಹ ಶುದ್ಧಿ ಮಾಡಿಕೊಂಡರೆ ಸಾಲದು. ಭಾರತದಲ್ಲಿ ಗಂಗಾ ನದಿಯನ್ನು ಪುಣ್ಯ ನದಿ ಎಂದು ಭಾವಿಸಿದ್ದು ಗಂಗೆ ನೀರಿನಲ್ಲಿ ಮಿಂದರೆ ಪಾಪ ನಿವಾರಣೆಯಾಗುತ್ತದೆ ಎಂಬುದು ಭಾವನೆ. ಆತ್ಮಶುದ್ಧಿಯಿಲ್ಲದೆ ಕೇವಲ ತನು ಶುದ್ಧಿಯಾದರೆ ಪಾಪ ನಿವಾರಣೆಯಾಗುವುದಿಲ್ಲ ಎಂಬುದಾಗಿ ವಚನಕಾರರು ಹೇಳಿದ್ದಾರೆ. ದೇಹ ಶುದ್ಧಿಯಿಂದ ಮಾಡಿದ ಕರ್ಮ ಮರೆಯಾಗುವುದಿಲ್ಲ. ಎಂಬುದನ್ನು ಗಾದೆಯು ತಿಳಿಸುತ್ತದೆ.

ತಗ್ಗೀನ ಕಡಗೇ ನೀರು ಹರಿಯೋದು

ಈ ಗಾದೆಯ ವಾಚ್ಯಾರ್ಥ ಮತ್ತು ಸೂಚ್ಯಾರ್ಥ ಬೇರೆ ಬೇರೆ ಇದೆ. ಎರಡೂ ಕೂಡ ತುಂಬಾ ಗಮನೀಯ ಅಂಶವನ್ನು ತೆರೆದಿಡುತ್ತವೆ. ಇದರಲ್ಲಿ ನೀತಿಯೊಂದು ಅಡಕವಾಗಿದೆ. ತಗ್ಗು ಎಂದರೆ ಇಳಿಜಾರು ಎಂದರ್ಥ. ನೀರು ದ್ರವರೂಪದ ವಸ್ತು ಆದುದರಿಂದ ಅದರ ಗುಣ ಹರಿಯುವುದು. ಅದೂ ತಗ್ಗಿನ ಕಡೆಗೆ, ಎತ್ತರವಾದ ಪ್ರದೇಶದಿಂದ ಕಡಿದಾದ ಪ್ರದೇಶದ ಕಡೆಗೆ ಹರಿಯುತ್ತದೇ ಹೊರುತು, ಕಡಿದಾದ ಪ್ರದೇಶದಿಂದ ಎತ್ತರವಾದ ಪ್ರದೇಶದ ಕಡೆಗೆ ಅಲ್ಲ. ಹಾಗೆಯೇ ಸೌಕರ್ಯಗಳು ಉಳ್ಳವರ ಕಡೆಗೇ ಹರಿಯುತ್ತವೆ ಎಂಬುದು ಇದರ ಸೂಚ್ಯಾರ್ಥ. ಯಾವುದೇ ಒಂದು ಸೌಕರ್ಯವಿದ್ದರೆ ಅದು ಇರುವವರನ್ನೇ ಅವಲಂಬಿಸಿ ನಡೆಯುತ್ತದೆ. ಅದನ್ನು ಪಡೆಯುವ ಸಾಮರ್ಥ್ಯ ಅವರಿಗೆ ಇರುತ್ತದೆ. ಸಾಮರ್ಥ್ಯವಿಲ್ಲದವರು ಅದನ್ನು ತಮ್ಮ ಕಡೆಗೆ ಎಳೆಯಲು ಸಾಧ್ಯವಿಲ್ಲ ಎಂಬುದನ್ನು ಗಾದೆಯು ತಿಳಿಸುತ್ತದೆ.

ದಡ್ಡ ಬಡ್ಡೀ ಮಗನೆ ಹೆಣ್ಣು ಯಾರು ಕೊಟ್ಟಾರು ಅಂದ್ರೆ

ನಮ್ಮ ಚಿಕ್ಕಪ್ಪನ ಮನೇಲಿ ಹದಿನಾರವೆ

ಈ ಗಾದೆಯು ಹಾಸ್ಯಕ್ಕೆ ಉದಾಹರಣೆಯಾಗಿದೆ. ದಡ್ಡನ ದಡ್ಡತನವನ್ನು ಹೆಡ್ಡತನದ ಉತ್ತರದ ಮೂಲಕ ಹಾಸ್ಯ ಉಕ್ಕಿ ಹರಿಯುವಂತೆ ಹೇಳಿದ್ದಾರೆ. ಇಲ್ಲಿ ಆತ ಮೊದಲೇ ದಡ್ಡ. ಸರಿಯಾದ ತಿಳುವಳಿಕೆ ಇಲ್ಲದವನು. ಯಾವುದು? ಏಕೆ? ಏನು? ಎಂಬುದರ ವಿಚಾರ ಅರಿಯದವನು. ಅಂಥವನನ್ನು ಯಾರೋ ಈ ರೀತಿ ಕೇಳಿದ್ದಾರೆ. ಲೋ ದಡ್ಡ ಬಡ್ಡೀ ಮಗನೇ ನೀನು ನೋಡಿದರೆ ಮೊದಲೇ ದಡ್ಡ ಇಂಥ ದಡ್ಡನಿಗೆ ಯಾರು ಹೆಣ್ಣು ಕೊಟ್ಟು ಮದುವೆ ಮಾಡುತ್ತಾರೆ? ಎಂದು. ಅದಕ್ಕೆ ಅವನ ಉತ್ತರ ನಮ್ಮ ಚಿಕ್ಕಪ್ಪನ ಮನೇಲಿ ಹದಿನಾರವೆ ಯಾವುದಾದರನ್ನು ಆದರಾಯಿತು ಎಂದು. ಆದರೆ ಅವರು ತಂಗಿಯರಾಗಬೇಕು ಎಂಬುದು ಅವನಿಗೆ ತಿಳಿಯದು. ಆದ್ದರಿಂದ ಇಲ್ಲಿ ಹಾಸ್ಯ ಹಾಸುಹೊಕ್ಕಾಗಿದೆ.

ದೋರೆ ಹಣ್ಣು ನೋಡೋಕೆ ಚಂದ

ಮಾಗಿದ ಹಣ್ಣು ತಿನ್ನೋಕೆ ಚಂದ

ದೋರೆ ಹಣ್ಣು ಇತ್ತ ಕಾಯೂ ಅಲ್ಲದ ಅತ್ತ ಪರಿಪಕ್ವ ಹಣ್ಣೂ ಅಲ್ಲದ ಮಧ್ಯಂತರ ಸ್ಥಿತಿಯದು ಗಟ್ಟಿಯಾಗಿರುತ್ತದೆ. ಮೇಲಾಗಿ ಬಣ್ಣ ತಿರುಗಿ ಕಣ್ಣಿಗೆ ಆಕರ್ಷಕವಾಗಿರುತ್ತದೆ. ಆದರೆ ಇನ್ನೂ ರಸಗೂಡಿರುವುದಿಲ್ಲ. ಮಾಗಿದ ಹಣ್ಣು ಅಷ್ಟು ಗಟ್ಟಿ ಇರುವುದಿಲ್ಲ; ಮೆದುವಾಗಿರುತ್ತದೆ; ಮೇಲಾಗಿ ರಸಗೂಡಿರುತ್ತದೆ. ಇಲ್ಲಿ ಬರುವ ದೋರೆ ಹಣ್ಣು ಮತ್ತು ಮಾಗಿದ ಹಣ್ಣು ಆ ಅರ್ಥದ ಹಂತದಲ್ಲೇ ವಿರಮಿಸುವುದಿಲ್ಲ. ದೋರೆ ಹಣ್ಣು ಪಡ್ಡೆ ಹುಡುಗ ಹುಡುಗಿಯರಿಗೂ ಮಾಗಿದ ಹಣ್ಣು ಪ್ರೌಢ ಸ್ತ್ರೀ ಪುರುಷರಿಗೂ ಪ್ರತಿನಿಧಿಯಾಗಿಬಿಡುತ್ತದೆ. ಪಡ್ಡೆ ಹುಡುಗ ಹುಡುಗಿಯರು ಹರೆಯದ ಹೊಸ್ತಿಲಲ್ಲಿರುವುದರಿಂದ ನೋಡಲು ಆಕರ್ಷಕವಾಗಿರುತ್ತಾರೆ. ಆದರೆ ಅವರೊಡನೆ ಬಾಳುವೆ ಮಾಡುವುದು ಕಷ್ಟ; ತಲೆನೋವು. ಏಕೆಂದರೆ ಸಣ್ಣಸಣ್ಣದಕ್ಕೆಲ್ಲ ಮುನಿಸಿಕೊಳ್ಳಬಹುದು; ಅಳಬಹುದು; ಬಿಗಿದುಕೊಳ್ಳಬಹುದು. ತೀರ ತಿಳಿಯದವರೊಡನೆ ಏಗಬಹುದು ಅಥವಾ ತಿಳಿದವರೊಡನೆ ಏಗಬಹುದು. ಆದರೆ ಇತ್ತ ತಿಳಿಯದವರೂ ಆಗದ ತಿಳಿದವರೂ ಆಗದ ಎಡಬಿಡಂಗಿ ಎಳಸು ಮನಸ್ಸಿನವರೊಡನೆ ಏಗುವುದು ಕಷ್ಟ. ಆದರೆ ಪ್ರೌಢ ಸ್ತ್ರೀ ಪುರುಷರಿಗೆ ಜೀವನ ಏನು ಎನ್ನುವುದು ಅರ್ಥವಾಗಿರುವುದರಿಂದ, ತಲೆತಾಕಿರುವುದರಿಂದ ಸಣ್ಣ ಸಣ್ಣದಕ್ಕೆಲ್ಲ ತಲೆ ಕೆಡಿಸಿಕೊಳ್ಳುವುದಿಲ್ಲ; ಒಗುತ್ತಾರೆ; ಒಗ್ಗಿಸಿಕೊಳ್ಳುತ್ತಾರೆ. ಬಾಳುವೆ ಸಹ್ಯವಾಗುತ್ತದೆ. ಈ ಎಲ್ಲ ಅರ್ಥ ಪರಂಪರೆಯನ್ನು ಒಳಗೊಂಡ ವಾಮನರೂಪಿಯಾಗಿದೆ. ಗಾದೆಯಲ್ಲಿ ಬಳಕೆಯಾಗಿರುವ 'ದೊರೆಹಣ್ಣು' ಮತ್ತು 'ಮಾಗಿದ ಹಣ್ಣು' ಎಂಬವು ರೂಪಕಗಳು.

ಕುರುಡನಿಗೆ ದೀಪ ಬೇಡ

ಹೊಂಗೆ ಮರ ಯಾಕೆ ಅಂದ್ಹಂಗೆ

ಬೆಣ್ಣೆಯಲ್ಲಿ ಕೂದಲು ತೆಗೆದಂತೆ ಮಾತಾಡುವ ದೇಶ ತಿರುಗುವ ಜಾಣ ಹಾಗೂ ಕಿಲಾಡಿ ವ್ಯಾಪಾರಿಗಳ ವ್ಯಾಪಾರ ಮನೋಧರ್ಮವನ್ನು ಗೇಲಿಮಾಡುತ್ತದೆ ಗಾದೆ. ಅಂದರೆ ಮರ ಬೇಕಾದವನು ನೇರವಾಗಿ ಕೇಳದೆ ವ್ಯಾಪಾರೀ ಮನೋಧರ್ಮದ ಕಿಲಾಡಿ ಮಾರ್ಗವನ್ನು ಹಿಡಿದು ಪರೋಕ್ಷವಾಗಿ ಪ್ರಸ್ತಾಪಿಸುತ್ತಾನೆ. ಕುರುಡನಿಗೆ ದೀಪ ಬೇಡ ಹೊಂಗೆ ಮರ ಏಕೆ? ಎಂದು. ಮೊದಲನೆಯ ಸಾಲಲ್ಲಿ ಬಳಕೆಯಾಗಿರುವ ಒಂದೊಂದು ಶಬ್ದವೂ ಅನಿವಾರ್ಯ. ಕುರುಡ ಹಾಗೂ ದೀಪ ಶಬ್ದಗಳಿಗಿರುವ ವೈದೃಶ್ಯ ಬಹುಮುಖ್ಯ. ಕುರುಡನಿಗೆ ಹಗಲೂ ಒಂದೇ, ರಾತ್ರಿಯೂ ಒಂದೇ; ಕಣ್ಣು ಬಿಚ್ಚಿಕೊಂಡಿದ್ದರೂ ಒಂದೆ; ಕಣ್ಣು ಮುಚ್ಚಿಕೊಂಡಿದ್ದರೂ ಒಂದೆ. ಆದ್ದರಿಂದ ಅವನಿಗೆ ದೀಪದ (ಬೆಳಕಿನ) ಅಗತ್ಯವಿಲ್ಲ.

ದೀಪಕ್ಕೂ ಹೊಂಗೆ ಮರಕ್ಕೂ ಸಾದೃಶ್ಯ ಸಂಬಂಧವಿದೆ. ಹಳ್ಳಿಗಳಲ್ಲಿ ಹಿಂದೆ ಹಣತೆಗೆ ಹೊಂಗೆ ಎಣ್ಣೆಯನ್ನು ಬಳಸುತ್ತಿದ್ದರು. ಆದ್ದರಿಂದ ಹೊಂಗೆ ಮರಗಳನ್ನು ಬೆಳೆಸುತ್ತಿದ್ದರು. ಹೊಂಗೆ ಕಾಯಿಗಳನ್ನು ಗಾಣಿಗನಿಗೆ ಕೊಟ್ಟು, ಗಾಣವಾಡಿಸಿ, ಹೊಂಗೆ ಎಣ್ಣೆಯನ್ನು ಪಡೆಯುತ್ತಿದ್ದರು. ಆದ್ದರಿಂದ ಕುರುಡನಿಗೆ ಬೆಳಕಿನ (ದೀಪದ) ಅದಶ್ಯಕತೆಯಿಲ್ಲದ್ದರಿಂದ. ಆ ದೀಪದ ಎಣ್ಣೆಗೆ ಆಧಾರವಾದ ಹೊಂಗೆ ಮರದ ಅವಶ್ಯಕತೆಯೂ ಇಲ್ಲ; ಸುಮ್ಮನೆ ಏಕೆ ಇಟ್ಟುಕೊಂಡಿದ್ದೀರಿ ನನಗೆ ಕೊಡಿ ಎಂಬುದು ಜಾಣ ವ್ಯಾಪಾರಿಯ ಮಾತಿನ ಇಂಗಿತ. ಇಂಥ ಬರೀ ತಾರ್ಕಿಕ ಜಾಡನ್ನು ಹಿಡಿದ ಜಾಣ ವ್ಯಾಪಾರಿಯ ಕಿಲಾಡಿ ಪ್ರಶ್ನೆಯನ್ನು 'ಅಂದ್ಹಂಗೆ' ಎಂಬ ಪ್ರಯೋಗದಿಂದ ಗೇಲಿ ಮಾಡಲಾಗಿದೆ. ಅಂದರೆ ಕುರುಡನಿಗೆ ದೀಪದ ಅಗತ್ಯವಿಲ್ಲದಿರಬಹುದು; ಕುರುಡನ ಯೋಗಕ್ಷೇಮವನ್ನು ನೋಡಿಕೊಳ್ಳುವ ಮನೆಯ ಇತರರಿಗೆ. ಬಂದು ಹೋಗುವ ನೆರೆ ಹೊರೆ ನೆಂಟರಿಷ್ಟರಿಗೆ ಬೆಳಕಿನ ಅವಶ್ಯಕತೆ ಇಲ್ಲವೆ? ಎಂಬ ಇನ್ನೊಂದು ಮಗ್ಗುಲಿನ ಅನುಕ್ತ ಸತ್ಯ 'ಅಂದ್ಹಂಗೆ' ಎಂಬ ಪ್ರಯಾಗದ ಮೂಲಕ ವ್ಯಂಗದ ಹಲ್ಲು ಪಡೆದುಕೊಂಡು ವ್ಯಾಪಾರಿಯ ಜಾಣ ಪ್ರಶ್ನೆಯ ಮೆದು ಜಾಗಕ್ಕೆ ಹಾಕಿದೆ. ಬಾಯಿ ಬಡಿದುಕೊಳ್ಳುವಂತೆ ಮಾಡಿದೆ.

ನಾನೆದ್ದು ಬಗುಳೋಕೆ ನಾಯಾಕೆ ಸಾಕಬೇಕು?

ಈ ಗಾದೆಯಲ್ಲಿ ಒಳಪ್ರಾಸದ ಜೊತೆಗೆ ಶ್ಲೇಷೆಯೂ ಬಳಕೆಗೊಂಡಿದೆ 'ನಾನೆದ್ದು' ಮತ್ತು 'ನಾಯಾಕೆ' ಎಂಬ ಒಳಪ್ರಾಸವಿದೆ. 'ನಾಯಾಕೆ' ಎಂಬುದು ಶ್ಲೇಷೆಯಾಗಿದೆ. ನಾ+ಯಾಕೆ, ನಾಯಿ+ಯಾಕೆ ಎಂಬ ಎರಡು ಅರ್ಥ ಪ್ರತೀತಿಯನ್ನು ಇದು ಪಡೆದುಕೊಂಡಿದೆ. ಇದಕ್ಕೆ ಹಿನ್ನಲೆಯಾದ ಒಂದು ಪ್ರಸಂಗ ಈ ರೀತಿ ಇದೆ. ಸಾಮಾನ್ಯವಾಗಿ ಕುಟುಂಬದಲ್ಲಿ ಹಿರಿಯ ವ್ಯಕ್ತಿ ಎನಿಸಿಕೊಂಡವನು ನಾಯಕನಂತಿರುತ್ತಾನೆ. ಅವನ ಮೇಲೆ ಎಲ್ಲ ಜವಾಬ್ದಾರಿ, ಹೊಣೆ ಇರುತ್ತದೆ. ದಿನವೂ ಬೇಗ ಎದ್ದು ಮಾಡಬೇಕಾದ ಕೆಲಸಗಳಿಗೆ ಮಾರ್ಗದರ್ಶನ ಮಾಡುತ್ತಾನೆ. ಈತ ಎದ್ದು ಕೆಮ್ಮಿದರೆ ಅಥವಾ ಕ್ಯಾಕರಿಸಿದರೆ ಮನೆಯ ಉಳಿದ ಸದಸ್ಯರು ಬೆಳಗಾಗಿದೆ ಎಂದು ತಿಳಿದು ಎದ್ದು ತಮ್ಮ ತಮ್ಮ ಕೆಲಸಗಳಿಗೆ ಹೊರಡುತ್ತಾರೆ. ಆದರೆ ಒಂದು ದಿನ ಈ ಮುಖ್ಯಸ್ಥ ಕಾರಣಾಂತರದಿಂದ ಬೇಗ ಏಳಲಿಲ್ಲ. ಆದ ಕಾರಣ ಉಳಿದ ಸದಸ್ಯರು ಕೂಡ ಏಳಲಿಲ್ಲ. ತುಸು ಹೊತ್ತಾದ ಮೇಲೆ ಎದ್ದ ಮುಖ್ಯಸ್ಥ ಬೆಳಕು ಹರಿದು ಆಗಲೇ ಸುಮಾರು ಸಮಯ ಕಳೆದಿರುವುದನ್ನು, ಇತರರು ಯಾರೂ ಎದ್ದು ಅವರ ಕೆಲಸಗಳಿಗೆ ಹೋಗದೇ ಇರುವುದನ್ನು ಗಮನಿಸಿದ ಆತ ರೇಗಾಡಿರಬೇಕು. ಆಗ ಇತರರು ನೀವು ಬೇಗ ಎದ್ದು ಕೆಮ್ಮಿದರೆ ತಿಳಿಯುತ್ತಿತ್ತು. ಆದರೆ ............... ಎಂದು ಹೇಳಿದರಬೇಕು. ಆಗ ಆ ಮುಖ್ಯಸ್ಥ ಈ ರೀತಿ ಹೇಳಿದ್ದಾನೆ. ನಾನು ಎದ್ದು ಬಗುಳಾಕೆ ನಾನು ನಿಮ್ಮನ್ನು ಏಕೆ ಸಾಕಬೇಕು ಎಂಬುದಾಗಿ. ಇವೇ ಮುಂತಾದ ಅರ್ಥ ಪ್ರತೀತಿಯನ್ನು ಇದು ಹೊಂದಿದೆ.

ನೀಡಿದ ಕೈಗೆ ನೆರವಾಗಬೇಕು

ಇಲ್ಲಿ 'ನ'ಕಾರದ ಅನುಪ್ರಾಸ ಕಂಡುಬರುತ್ತದೆ. ಜೊತೆಗೆ ನೀತಿಯೂ ಇದೆ. ಸಹಾಯ ಎಂಬುದು ತುಂಬಾ ದೊಡ್ಡಗುಣ. ಇಂದು ಯಾರೂ ಅಷ್ಟು ಸುಲಭವಾಗಿ ಸಹಾಯ ಮಾಡುವುದಿಲ್ಲ. ಆದರೂ ಕೆಲವರು ಆ ರೀತಿಯ ಗುಣವನ್ನು ಹೊಂದಿದವರು ಇರುತ್ತಾರೆ. ಅಂಥವರು ಬೇರೆಯವರು ಕಷ್ಟದಲ್ಲಿದ್ದಾರೆ ಎಂದು ತಿಳಿದರೆ ಅವರ ಮನ ಕರಗಿ ಅವರಿಗೆ ತಮ್ಮಲ್ಲಿ ಶಕ್ತವಿದ್ದಷ್ಟು ಸಹಾಯ ಮಾಡುತ್ತಾರೆ. ಇದು ಅವರ ದೊಡ್ಡ ಗುಣ ಅಂಥ ಸಂದರ್ಭದಲ್ಲಿ ಅವರಿಗೆ ಕೃತಘ್ನತೆ ತಿಳಿಯಬೇಕು. ಯಾವುದೋ ಒಂದು ಸಮಯದಲ್ಲಿ ಅಂಥ ವ್ಯಕ್ತಿ ತೊಂದರೆಗೆ ಸಿಲುಕಿದಾಗ ನಾವು ಸಹಾಯ ಮಾಡಬೇಕು. ಮನುಷ್ಯನಿಗೆ ಮನುಷ್ಯನೇ ಆಗಬೇಕೆ ಹೊರತು ಬೇರೆ ಯಾವುದೂ ಅಲ್ಲ. ಇದರ ವಾಚ್ಯಾರ್ಥ ಈ ರೀತಿ ಯಾವುದಾದರು ಹಳ್ಳದಲ್ಲಿ ಕೆಸರಿನಲ್ಲಿ ಬಿದ್ದು ಸಾಯುತ್ತಿರುವಾಗ ಬೇರೆಯವರು ಬಂದು ತಮ್ಮ ಕೇ ನೀಡಿ ಆ ಮೂಲಕ ಅವರನ್ನು ಹೊರತರಲು ಸಹಾಯ ಮಾಡುತ್ತಾರೆ. ಹೊರಬರಲು ಸಹಾಯ ಮಾಡಿದ ಕೈಗೆ ಅಂದರೆ ಆ ವ್ಯಕ್ತಿಗೆ ವಿಧೇಯರಾಗಿ. ಅವರ ತೊಂದರೆಗೆ ನೆರವಾಗಬೇಕು ಎಂಬುದೇ ಗಾದೆಯ ಉದ್ದೇಶಿತಾರ್ಥ.

ನೀರು ಮೇಲಿನ ಎಣ್ಣೆ ನುಣುಪು ತಪ್ತು

ಹೆಣ್ಣಿಗೆ ತೌರುಮನೆ ಆಸೆ ತಪ್ತು

ಹರಳೆಣ್ಣೆಗಾಗಿ, ನಿರಿಟ್ಟು ಹರಳು ಬೇಯಿಸುತ್ತಾರೆ. ಬೆಂದಾದ ಮೇಲೆ, ನೀರಿನ ಮೇಲೆ ತೇಲುವ ಎಣ್ಣೆಯನ್ನೆಲ್ಲ ಅಂಗೈಯಲ್ಲಿ ದೇವಿ ದೇವಿ ಕುಡಿಗೆಗೋ ಮಡಿಕೆಗೋ ತುಂಬಿಕೊಳ್ಳುತ್ತಾರೆ. ಎಷ್ಟೇ ತೆಗೆದರೂ ನೀರಿನ ಮೇಲೆ ಎಣ್ಣೆಯ ನುಣುಪು ಕೊಂಚವೂ ಉಳಿಯದಂತೆ ಮಾಡಲು ಸಾಧ್ಯವಿಲ್ಲ. ಆದ್ದರಿಂದ ಎಷ್ಟೇ ಪ್ರಯತ್ನಿಸಿದರೂ ಹೇಗೆ ನೀರಿನ ಮೇಲಿನ ಎಣ್ಣೆಯ ನುಣುಪು ಹೋಗುವುದಿಲ್ಲವೋ ಹಾಗೆ ಹೆಣ್ಣಿಗೆ ತೌರುಮನೆಯ ಆಸೆ ಹೋಗುವುದಿಲ್ಲ. ಎಂಬುದು ಧ್ವನಿತವಾಗಿದೆ. ಆದರೆ ಅಭಿವ್ಯಕ್ತಿಯ ಹೊಸತನ ಮನಸ್ಸನ್ನು ಆಕರ್ಷಿಸುತ್ತದೆ. ಗಾದೆಯ ಪೂರ್ವಾರ್ಧ ತೋರಿಕೆಗೆ ನೇರ ಹೇಳಿಕೆಯಂತೆ ಭಾಸವಾದರೂ, ಹಾಗಿರದೆ ಅದು ಷರತ್ತಿನ ಧಾಟಿಯಲ್ಲಿದೆ. ನೀರ ಮೇಲಿನ ಎಣ್ಣೆ ನುಣುಪು ತಪ್ಪಿದರೆ, ಹೆಣ್ಣಿಗೆ ತೌರುಮನೆಯ ಆಸೆ ತಪ್ಪುತ್ತದೆ ಎನ್ನುತ್ತದೆ ಗಾದೆ. ಎಣ್ಣೆಯ ನುಣುಪು ಎಂದಿಗೂ ತಪ್ಪುವುದಿಲ್ಲ. ಹಾಗೇಯೇ ಹೆಣ್ಣಿಗೆ ತೌರುಮನೆಯ ಆಸೆಯೂ ತಪ್ಪುವುದಿಲ್ಲ. ಆಸೆಗೆ ಎಣ್ಣೆಯ ನುಣುಪು(ಜಿಡ್ಡು) ಸಂಕೇತವಾಗಿರುವುದು ಸೊಗಸಾಗಿದೆ. ಅಭಿವ್ಯಕ್ತಿಯ ಹಲವಾರು ವೈವಿಧ್ಯಗಳನ್ನು ಕಾಣಬೇಕಾದರೆ, ನವುರು, ನಾವಿನ್ಯತೆ, ನಯ-ನಾಜೂಕು, ಬಾಗು-ಬಳಕುಗಳನ್ನು ನೋಡಬಾಕಾದರೆ ಭಾಷೆಯನ್ನು ಹೇಗೆಂದರೆ ಹಾಗೆ ಮಿದ್ದು, ತಿದ್ದಿ ಬಳಸುವುದನ್ನು ಮನಗಾಣಬೇಕಾದರೆ ಗಾದೆಗಳ ಮೊರೆ ಹೋಗಬೇಕು. ಉದಾಹರಣೆಗೆ ತಪ್ಪಿದರೆ ಎನ್ನುವ ಅರ್ಥದಲ್ಲಿ ಬಳಸಲಾಗಿರುವ ಈ ಗಾದೆಯ ಪೂವಾರ್ಧದ 'ತಪ್ತು' ಶಬ್ದವನ್ನು ಮಿದ್ದು

ಮಾಡಿರುವ ಹದ ಮನನಯೋಗ್ಯ. ಅಲ್ಲದೆ 'ನೀರ ಮೇಲಿನ ಎಣ್ಣೆ ನುಣುಪು ತಪ್ಪುವುದಿಲ್ಲ. ಹೆಣ್ಣಿಗೆ ತೌರುಮನೆ ಆಸೆ ತಪ್ಪುವುದಿಲ್ಲ' ಎಂದು ನೇರ ಹೇಳಿಕೆಯಂತೆ ಅನುಭವವನ್ನು ಮಂಡಿಸದೆ ಈಗಿರುವ ರೀತಿಯಲ್ಲಿ ಮಂಡಿಸಿರುವುದು ಅಭಿವ್ಯಕ್ತಿಯ ಹೊಸತನದ ವೈವಿಧ್ಯವನ್ನು ಸೂಚಿಸುತ್ತದೆ.

ಬಡವನೆಂಡ್ತಿ ಬೇಲೀ ಉವ್ವು

ಅತ್ಯಂತ ಸಾರ್ಥಕವಾದ ರೂಪಕವನ್ನು ಜನಪದರು ಇಲ್ಲಿ ಬಳಸಿದ್ದಾರೆ. ಬೇಲಿಯಲ್ಲಿ ಹುಟ್ಟಿ ಬೆಳೆದು ಈಗ ಆಕರ್ಷಕವಾದ ಹೂವುಗಳನ್ನು ಬಿಟ್ಟು ಶೋಭಿಸುತ್ತಿರುವ ಹೂವಿನ ಗಿಡಕ್ಕೆ ಬಡತನ ಹೆಂಡತಿಯನ್ನು ಹೋಲಿಸಿರುವುದರ ಔಚಿತ್ಯವೆಷ್ಟು ಸಾರ್ಥಕತೆ ಎಷ್ಟು. ಬೇಲಿಯೊಳಗಿನ ತೋಟದಲ್ಲಿರುವ ಹೂವು, ಹಣ್ಣುಗಳನ್ನು ಯಾರು ಬೇಕಾದರೂ ಕೊಯ್ತು ಬಳಸುವಂತಿಲ್ಲ ಬೇಲಿ ಅದಕ್ಕೆ ಅಡ್ಡಿ ಒದಗಿಸುತ್ತದೆ; ಕಾವಲಾಗಿರುತ್ತದೆ. ಆದರೆ ಆ ಬೇಲಿಯಲ್ಲೇ ಹೂತಿರುವ ಹೂವಿಗೆ ಯಾರ ಕಾವಲಿದೆ? ಅದನ್ನು ಯಾರು ಬೇಕಾದರೂ ಮುಟ್ಟಿ ಮೂಸಿ ನೋಡಬಹುದು, ಕುಯ್ದು ಮುಡಿಯುವುದೂ ಸುಲಭ ಸಾಧ್ಯ.

ಬಡವನ ಹೆಂಡತಿ ಬೇಲಿಯಲ್ಲಿನ ಹೂವಿನಂತೆ. ಆಕೆ ಜನ ಸಾಮಾನ್ಯರ ನೋಟಕ್ಕೆ ನುಡಿಗೆ ಸುಲಭವಾಗಿ ತುತ್ತಾಗುತ್ತಾಳೆ. ಆಕೆಯನ್ನು ಆಡಿ ನೋಡಿ ದಕ್ಕಿಸಿಕೊಳ್ಳುವುದು ಸುಲಭ. ಏಕೆಂದರೆ ಆಕೆ ಬಡವನ ಹೆಂಡತಿ, ತನ್ನ ದುಃಖ ತಾಪತ್ರಯಗಳೆಷ್ಟಿದ್ದರೂ ಅವನ್ನು ಬಾಯಿ ಮುಚ್ಚಿಕೊಂಡು ಸಹಿಸಿಕೊಳ್ಳಬೇಕಾಗಿದೆ. ಆಕೆಯ ಪ್ರತಿಕ್ರಿಯೆ, ಶೀಲ, ಸೌಂದರ್ಯಗಳೇನೇ ಇದ್ದರೂ ನೋಡುವ ಆಡುವ ಜನಕ್ಕೆ ಮಾತ್ರ ಆಕೆ ಬೇಲಿಯ ಹೂವಿನಂತೆ ಸುಲಭ; ಅರಕ್ಷಿತೆ. ಈ ಗಾದೆ ಬಡವರ ಮಡದಿ, ಮಕ್ಕಳು ಸಹಜ ಸೌಂದರ್ಯದಿಂದ ಆಕರ್ಷಕವಾಗಿರುತ್ತಾರೆಂಬುದನ್ನೂ ಸೂಚಿಸುತ್ತದೆ. ಅವರು ಅನ್ಯರ ಸ್ವತ್ತು ಎಂದು ಸಾರುತ್ತದೆ. ಎಲ್ಲಕ್ಕಿಂತ ಮಿಗಿಲಾಗಿ ಬಡತನವೆಂಬುದು ಎಂಥ ದೌರ್ಬಲ್ಯ, ಶಾಪ ಎಂಬುದನ್ನು ಸೊಗಸಾಗಿ ನುಡಿದಿದೆ. ಮಹಲಿಂಗಸ್ವಾಮಿಯ ವಚನದ ಅಭಿಪ್ರಾಯವಾದರೂ ಇದನ್ನೇ ಧೃಡಪಡಿಸುತ್ತದೆ. 'ಬಡತನ ಸತಿಗಿಂತ, ಬಲ್ಲಿದನ ಮನೆಯೊಳಗೆ ಗೌಡಿ (ದಾಸಿ) ಯಾಗಿರಲು ಉತ್ತಮವು' 'ಬರೀ ಮಗ್ಗುಲಿಗಿಂತ ಕಡೆಯ ಬಡವರ ಹುಡುಗಿ'? ಎಂಬ ಮತ್ತೊಂದು ಗಾದೆಯೂ ಇದೇ ದುರ್ಗತಿಯನ್ನು ಸೂಚಿಸುತ್ತದೆ.

ಮಟ್ಟು ತಿಳೀದೆ ಮಾತಾಡವಾರ್ದು

'ತರವಲ್ಲ ತಗೀ ನಿನ್ನ ತಂಬೂರಿ ಸ್ವರ, ಬರದೇ ಬಾರಿಸದಿರುವ ತಂಬೂರಿ' ಎಂಬ ಶಿಶುನಾಳ ಷರೀಫರ ತತ್ವಪದದಂತೆ ಈ ಗಾದೆಯು ಅರ್ಥ ಪ್ರತೀತಿಯನ್ನು ಹೊಂದಿದೆ. ಸ್ವರ ಯಾವುದೆಂದು ತಿಳಿಯದೆ ತಂಬೂರಿ ಬಾರಿಸಿದರೆ ಸ್ವರ ತಪ್ಪಿ ಲಯ ಕೆಡುತ್ತದೆ. ಹಾಗೆಯೇ ಮಾತಿನ ಸ್ವರ ಯಾವುದು?

ಎಂಬುದು ಮೊದಲು ತಿಳಿಯಬೇಕು. ಅನಂತರ ಅದಕ್ಕನುಗುಣವಾಗಿ ಮಾತನಾಡಬೇಕು. ಯಾವುದೋ ಒಂದು ಗಹನವಾದ ವಿಚಾರವನ್ನು ಮಾತನಾಡುವಾಗ ಅದನ್ನು ತಿಳಿಯದೆ. ಮಾತಿನ ಮಧ್ಯೆ ಅನವಶ್ಯಕವಾದ, ತಲೆಹರಟೆಯ ಮಾತನ್ನು ಆಡಬಾರದು. ಆ ಸಂದರ್ಭದಲ್ಲಿ ಮಾತನಾಡುತ್ತಿರುವ ವಿಷಯಕ್ಕೆ ಅಡ್ಡಿ ಉಂಟುಮಾಡುವುದಲ್ಲದೆ. ಅವರ ಕೋಪಕ್ಕೆ ಗುರಿಯಾಗಬೇಕಾಗುತ್ತದೆ. ಆದುದರಿಂದ ವಿಷಯ ಯಾವುದು? ಗಂಭೀರವಾದುದೇ? ರಹಸ್ಯವಾದುದೇ? ಹಾಸ್ಯಕ್ಕೆ ಹತ್ತಿರವಾದದೇ? ಎಂಬುದನ್ನು ತಿಳಿದು ಅದಕ್ಕೆ ಸ್ವರ ಸೇರಿಸುವುದರಿಂದ ಯಾವುದೇ ಅಪಾಯವಿಲ್ಲ. ಇದು ಇಷ್ಟಕ್ಕೇ ನಿಲ್ಲದೆ ತನ್ನ ಅರ್ಥ ಪ್ರತೀತಿಯನ್ನು ವಿಸ್ತರಿಸುತ್ತಾ ಹೋಗುತ್ತದೆ. ಅರಿವಿಲ್ಲದೆ ಅವಿವೇಕಿಗಳಂತೆ ವರ್ತಿಸುವ ವ್ಯಕ್ತಿಗಳನ್ನು ಛೇಡಿಸುವ ಅರ್ಥವನ್ನು ತಿಳಿಸುತ್ತದೆ. ಇಲ್ಲಿ 'ಮ' ಕಾರದ ಅನುಪ್ರಾಸದ ಜೊತೆಗೆ ಗಹನವಾದ ವಿಷಯವೊಂದನ್ನು ಅತ್ಯಂತ ರಮ್ಯವಾಗಿ ಚಿಕ್ಕ ವಾಕ್ಯದ ಮೂಲಕ ಧ್ವನಿಸುತ್ತದೆ.

ಮನೇಲಿಲ್ಲ ಮಂಗ್ಳಾರ ಒಪ್ಪತ್ತು

ಬಡತನದ ಚಿತ್ರಣವನ್ನು ಅತ್ಯಂತ ಮನೋಹರವಾಗಿ ಈ ಗಾದೆ ತಿಳಿಸುತ್ತದೆ. 'ಮನೇಲಿಲ್ಲ' ಎಂದರೆ ತಿನ್ನುವುದಕ್ಕೆ ಯೋಗ್ಯವಾದ ಯಾವುದೇ ವಸ್ತುವಿಲ್ಲ ಎಂಬುದನ್ನು ಸೂಚಿಸುತ್ತದೆ. ಹಳ್ಳಿಗಾಡಿನಲ್ಲಿ ಜನಸಾಮಾನ್ಯರು ಅನ್ನವೋ, ರೊಟ್ಟಿಯೋ, ಸೊಪ್ಪೋ ಯಾವುದನ್ನಾದರೂ ತಿಂದು ಜೀವನ ಸಾಗಿಸುತ್ತಾರೆ. ಆದರೆ ಅದು ಯಾವುದೂ ಇಲ್ಲದಿದ್ದರೆ ಅಂದು ಬರೀ ಹೊಟ್ಟೆಯೇ ಸರಿ. ಒಪ್ಪತ್ತು ಎಂದರೆ ಒಂದು ಹೊತ್ತು. ಸಾಮಾನ್ಯವಾಗಿ ದೇವರಿಗೆ ವ್ರತ ಕೈಗೊಂಡಿದ್ದಾಗ ಒಂದು ಹೊತ್ತು ಊಟ ಮಾಡುವುದು ಸಹಜ. ಇದೇ ಕಾರಣವನ್ನು ಮುಂದಿಟ್ಟುಕೊಂಡು ಈ ಕುಟುಂಬ ಸಮಾಜದ ದೃಷ್ಟಿಯಲ್ಲಿ ಕೀಳಾಗಿಸಿಕೊಳ್ಳಲು ಇಷ್ಟಪಡದೆ ಒಪ್ಪತ್ತು ಮಾಡುತ್ತಿದ್ದೇನೆ. ಅದರಿಂದ ಊಟ ಮಾಡಿಲ್ಲ ಇಂಬುದಾಗಿ ತಿಳಿಸುತ್ತದೆ. ಇದು ಜಾರಿಕೆಯ ಉತ್ತರ. ಆದರೆ ವಾಸ್ತವ ಪರಿಸ್ಥಿತಿಯೇ ಬೇರೆಯಾಗಿದ್ದು, ಕುಟುಂಬವನ್ನು ಆವರಿಸಿರುವ ಕಡುಬಡತನವೇ ಮುಖ್ಯವಾಗಿದೆ. ಇವೇ ಮುಂತಾದ ಅಂಶಗಳನ್ನು ಈ ಗಾದೆಯು ತನ್ನಲ್ಲಿ ಅಡಗಿಸಿಕೊಂಡಿದೆ.

ಮಂಜಿನ ಹಿಂದೆ ಮಳೆ

ಗಂಜಿ ಹಿಂದೆ ಅನ್ನ

ಅನುಭವದ ಅಭಿವ್ಯಕ್ತಿಯೇ ಕಾವ್ಯ ಎಂಬುದಾಗಿ ತಿಳಿದಿದೆ. ಅದೇ ರೀತಿ ಜನಸಾಮಾನ್ಯರ ಅನುಭವ ಈ ಗಾದೆಯ ರೂಪದಲ್ಲಿ ಅಭಿವ್ಯಕ್ತಿ ಪಡೆದಿದೆ. ದಟ್ಟವಾದ ಮಂಜು ಬಿದ್ದರೆ ಮಳೆ ಸಾಮಾನ್ಯವಾಗಿ ಬರುತ್ತದೆ ಎಂಬುದು ಅನುಭವದಿಂದ ತಿಳಿದ ವಿಷಯ. ದಟ್ಟವಾದ ಮಂಜು ಬಿದ್ದರೆ

ವಾತಾವರಣದಲ್ಲಿ ಹರಡಿದ್ದ ಧೂಳು ಮಂಜಿಗೆ ಕರಗಿ ಕೆಳ ಸುರಿಯುತ್ತದೆ. ಇದರಿಂದ ವಾತಾವರಣ ಶುಭ್ರಗೊಂಡು ಸೂರ್ಯನ ಕಿರಣಗಳು ಯಾವುದೇ ಅಡೆ ತಡೆಯಿಲ್ಲದೆ ನೇರವಾಗಿ ಭೂಮಿಗೆ ಬೀಳುತ್ತವೆ. ಸೂರ್ಯನ ಶಾಖ ಅಧಿಕವಾಗಿರುತ್ತದೆ. ಬಿಸಿಲು ಅಧಿಕವಾಗಿದ್ದರೆ ನೆಲದ ಮೇಲಿನ ನೀರು ಆವಿಯಾಗಿ ಮೇಲೇರುತ್ತದೆ. ಅನಿಲ ರೂಪದಲ್ಲಿ ಮೇಲೇರಿದ ನೀರು. ಮೋಡವಾಗಿ ಪರಿವರ್ತನೆಗೊಳ್ಳುತ್ತದೆ. ಮೋಡದ ಮೇಲೆ ಮತ್ತೆ ಅದೇ ಅಧಿಕ ತಾಪಮಾನದ ಬಿಸಿಲು ಬೀಳುವುದರಿಂದ ಮಳೆಯಾಗುತ್ತದೆ. ಹಾಗೆಯೇ ಅಕ್ಕಿ ಮತ್ತು ನೀರನ್ನು ಬೇಯಲು ಇಟ್ಟಾಗ ಅಕ್ಕಿ ಅನ್ನವಾಗಿ ಮಾರ್ಪಡುತ್ತದೆ. ನೀರು ಗಂಜಿಯಾಗುತ್ತದೆ. ಗಂಜಿಯನ್ನು ಹೊರತೆಗೆದರೆ ಅದರ ಹಿಂದೆ ಅನ್ನ ಉಳಿಯುತ್ತದೆ. ಇದೂ ಕೂಡ ಅನುಭವದಿಂದ ತಿಳಿದ ವಿಷಯವಾಗಿದೆ.

### ಯಾವ ಕಾಲು ಮುರಿದರೂ ಸೊಂಟಕ್ಕೆ ಊನ

ಇದು ಉಭಯ ಸಂಕಟವನ್ನು ಸೂಚಿಸುತ್ತದೆ. ಮನುಷ್ಯನಿಗೆ ಸಾಮಾನ್ಯವಾಗಿ ಎರಡು ಕಾಲುಗಳು, ಅದರಲ್ಲಿ ಯಾವುದೇ ತೊಂದರೆಗೆ ಒಳಪಟ್ಟರೂ ಅದು ಅವನಿಗೇ ತೊಂದರೆ. ಎರಡು ಕಾಲುಗಳಲ್ಲಿ ಎಡಗಾಲು ಮುರಿದರೆ ಆಗ ಬಲಗಾಲಿನ ಮೇಲಿ ಒತ್ತಡ ಬೀಳುತ್ತದೆ ಸೊಂಟ ನೋವು ಅನುಭವಿಸುತ್ತದೆ. ಬಲಗಾಲು ಮುರಿದರೆ ಆಗ ಎಡಗಾಲಿನ ಮೇಲಿ ಒತ್ತಡ ಬೀಳುವುದರಿಂದ ತಾನೇ ತಾನಾಗಿ ಆ ಕಡೆಯ ಸೊಂಟ ನೋವು ಅನುಭವಿಸುತ್ತದೆ. ಆದುದರಿಂದ ಯಾವ ಕಾಲು ಮುರಿದರೂ ಅವು ಸೊಂಟವನ್ನು ಆಶ್ರಯಿಸಿರುವುದರಿಂದ ಸೊಂಟಕ್ಕೆ ತೊಂದರೆ. ಆದರೆ ಈ ಅರ್ಥ ಇಲ್ಲಿಗೇ ನಿಲ್ಲುವುದಿಲ್ಲ. ಇದು ಇನ್ನೂ ಮುಂದೆ ಹೋಗಿ ಬೇರೆಯೇ ಅರ್ಥವನ್ನು ಸ್ಪುರಿಸುತ್ತದೆ. ತಾಯಿ ಹಾಗೂ ಹೆಂಡತಿ ಪರಸ್ಪರ ಜಗಳವಾಡಿದ್ದಾರೆ. ಹೆಂಡತಿ ನಿರಪರಾಧಿ. ತಾಯಿ, ಅತ್ತೆ ಎಂಬ ದರ್ಪದಿಂದ ಮೇಲ್ಬಿದು ಅಧಿಕಾರ ಚಲಾಯಿಸಿದ್ದಾಳೆ. ಗಂಡನ ಮನೆಗೆ ಬಂದ ಕೂಡಲೇ ಹೆಂಡತಿ ಅತ್ತೆಯ ಕಿರುಕುಳವನ್ನು ತನ್ನ ನಿರಪರಾಧವನ್ನೂ ಹೇಳಿ, ಕುಯ್ಯೋ, ಮರ್ರ್‍ರೋ ಎನ್ನುತ್ತಾಳೆ. ಹೀಗೆ ಆದರೆ ಈ ಮನೆಯಲ್ಲಿ ಏಗಲಾರೆ ಎನ್ನುತ್ತಾಳೆ. ಆಗ ಗಂಡ ಸಂಧಿಗ್ಧತೆಗೆ ಸಿಕ್ಕುತ್ತಾನೆ. ಈ ಕಡೆ ಹೆತ್ತ ತಾಯಿ; ಆ ಕಡೆ ಅಗ್ನಿಸಾಕ್ಷಿಯಾಗಿ ಕೈಹಿಡಿದ ಹೆಂಡತಿ. ತಾಯಿಯದೆ ತಪ್ಪಾದರೂ ಹೆಂಡತಿಯ ಎದುರು ತಾಯಿಯನ್ನು ಬಯ್ಯಲಾರ. ಹಾಗೆ ಮಾಡಿದರೆ ಹೆಂಡತಿಗೆ ಸದರವಾಗುತ್ತದೆ. ತಾಯಿ ಅವಳ ಕಾಲ ಕಸವಾಗುತ್ತಾಳೆ. ಹೆಂಡತಿಯನ್ನೇ ಮುಖಮುರಿದು ಕೂಡಿಸೋಣ ಎಂದರೆ ಆಕೆ ನಿರಪರಾಧಿ. ನಿರಪರಾಧಿಯನ್ನು ದಂಡಿಸಿದರೆ ಅವಳ ಮನಸ್ಸು ಕೆಡುತ್ತದೆ. ಸಂಸಾರದಲ್ಲಿ ಒಡಕು ವೈಮನಸ್ಸು ಮೂಡುತ್ತದೆ. ಏನು ಮಾಡುವುದು? ಈ ದ್ವಂದ್ವವನ್ನು ಮೇಲಿನ ಚುಟುಕು ಗಾದೆ ತನ್ನ ರೂಪಕ ಶಕ್ತಿಯಿಂದ ತುಂಬ ಸಮರ್ಥವಾಗಿ ಓದುಗರ ಅಥವಾ ಕೇಳುಗರ ಮನಮುಟ್ಟಿಸುತ್ತದೆ.

ಸೊಕ್ಕಿದೇನೇ ಸೋರೆ ಬುರುಡೆ ಅಂದ್ರೆ

ಬತಗೆಡಿಸಿತು ಬ್ಯಾಸಿಗೆ ಬಿಸಿಲು

ಇದು ಸಂವಾದಾತ್ಮಕ ಗಾದೆ; ಪ್ರಾಯಶಃ ವಿವಾಹ ಪೂರ್ವ ಹರೆಯದ ಹೆಣ್ಣುಗಂಡುಗಳ ಮಧ್ಯೆ ಜರುಗಿರುವಂಥದು. ಗಂಡು ಮೊದಲಿನಿಂದಲೂ ಹೊಂಚು ಹಾಕುತ್ತಿರಬೇಕು. ಹೆಣ್ಣು ಅವನ ಯಾವ ಆಟಕ್ಕೂ ಸೊಪ್ಪು ಹಾಕದೆ, ಜೋರು ಜಬರ್‌ದಸ್ತಿನಿಂದ ಇದ್ದಿರಬೇಕು. ಆದರೆ ಹಸಿಕಾಯಿ ಎಷ್ಟು ದಿನ? ಹಸು ಮಕ್ಕಳು ಎಷ್ಟು ದಿನ? ಹಾಗೆಯೇ ಹೆಣ್ಣಿನ ಧೃಡ ನಿರ್ಧಾರ ಎಷ್ಟು ದಿನ? ತೊಟ್ಟು ಮಾಗಿದ ಹಣ್ಣೂ ಒಂದೆ; ಕಟ್ಟು ಹರೆಯದ ಹೆಣ್ಣೂ ಒಂದೆ. ಕೆಳಗೆ ಕೊಚ್ಚೆ ಇರಲಿ, ತಿಪ್ಪೆ ಇರಲಿ; ತನ್ನ ಮುಂದಿನ ಗತಿ ಏನು ಎಂದು ಯೋಚಿಸದೆ ತೊಪ್ಪನೆ ಬಿದ್ದುಬಿಡುತ್ತದೆ. ಒಂದಲ್ಲ ಒಂದು ದಿನ ಹಾಗಾಗಿರಬೇಕು. ಈ ಹೆಣ್ಣು ಗಂಡುಗಳ ಮಧ್ಯೆ. ಗಂಡು, ತನ್ನನ್ನು ಇಷ್ಟು ದಿನವೂ ಹೆಣಗಿಸಿದ, ಪರದಾಡಿಸಿದ ಹೆಣ್ಣಿನ ದೇಹ ಸೌಖ್ಯ ಹೊಂದಿದ ಮೇಲೆ ಕಿಚಾಯಿಸುವ ಧಾಟಿಯಲ್ಲಿ 'ಸೊಕ್ಕಿದೇನೇ ಸೋರೆ ಬುರುಡೆ'? ಎಂದಿರಬೇಕು. ಸೋರೆ ಮೆದು; ಗಟ್ಟಿಯಲ್ಲ. ಹಾಗೆಯೇ ಹೆಣ್ಣು ಸಹ ಎಂಬುದು ಸೂಚಿತವಾಗಿದೆ. ಅಲ್ಲದೆ 'ಸೋರೆ ಬುರುಡೆ' ಎಂಬ ಮಾತಿನಲ್ಲಿ ಹೆಣ್ಣು ಎಷ್ಟೆ, ಜಾರುವುದಿಲ್ಲವೆಂಬ ಶಪಥವನ್ನು ಸಾವಿರ ವಿಧವಾಗಿ ತೋರಿಸಿಕೊಂಡರೂ ಅದೆಲ್ಲ ಬುರುಡೆ. ಅಧೃಡತೆ ಹೆಣ್ಣಿನ ಜಾಯಮಾನವಾದುದರಿಂದ ವಿರೋಧವೆಲ್ಲ ಉಡಾಫೆಯದು ಎಂಬ ಭಾವ ಅಡಕವಾಗಿದೆ. ನಿನ್ನ ಸೊಕ್ಕು ಇಳಿಯಿತ? ಸೋತೆಯ? ಸೊರಗಿದೆಯ? ಎಂದು ಗಂಡು ವಿಜಯ ಗರ್ವದಲ್ಲಿ ಕೀಟಲೆ ಮಾಡಿದಾಗ, ಹಾಗೆ ಸೋಲನ್ನು ಒಪ್ಪಿಕೊಳ್ಳಲಿಚ್ಚಿಸದ ಹೆಣ್ಣು 'ನನ್ನ ಬತ ಕೆಟ್ಟದ್ದು ಬ್ಯಾಸಗೆ ಬಿಸಿಲಿನಿಂದ; ನಿನ್ನಿಂದ ಅಲ್ಲ' ಎಂದು ಸೇರಿಗೆ ಸವಾಸೇರಾಗಿ ಉತ್ತರಿಸಿರಬಾಕು. ಇದಿಷ್ಟೂ ಹಿನ್ನಲೆ. ಆದರೆ ಗಾದೆಯಲ್ಲಿ ಬಳಕೆಯಾಗಿರುವ ಪ್ರತಿಯೊಂದು ಶಬ್ದವೂ ಔಚಿತ್ಯಪೂರ್ಣ; ಅರ್ಥಗರ್ಭಿತ. ಬೇಸಿಗೆ ಏರು ಜವ್ವನವನ್ನೂ, ಅದರ ಕಾವನ್ನೂ, ಬಿಸಿಲು ಕಾಮಜ್ವಾಲೆಯನ್ನೂ ಅದರ ಪ್ರಖರತೆಯನ್ನೂ ಬತ ಅದುವರೆಗೆ ಎಚ್ಚರಿಕೆಯಿಂದ ಕಾಪಾಡಿಕೊಂಡು ಬಂದ ಕನ್ಯಾವ್ರತವನ್ನು ಪ್ರತಿಮಿಸುತ್ತವೆ. ಆದ್ದರಿಂದ ಏರು ಜವ್ವನದ ಮೈಯಲ್ಲಿ ಭುಗ್ಗೆಂದು ಹೊತ್ತಿಕೊಂಡ ಕಾಮಜ್ವಾಲೆ ನನ್ನ ಕನ್ಯಾವ್ರತವನ್ನು ಕೆಡಿಸಿತೇ ಹೊರತು ನೀನಲ್ಲ. ನಿನ್ನ ಹೊಂಚು ಸಂಚು ಆಟಮಾಟಗಳಲ್ಲ ಎಂಬ ಹೆಣ್ಣಿನ ಭಾವ ಸ್ಪುಟವಾಗಿ ಸೂಚಿತವಾಗುತ್ತದೆ. ಈ ಎಲ್ಲ ಭಾವವನ್ನು ಅಜ್ಞಾತ ಕವಿ ಕೇವಲ ಸಂವಾದಾತ್ಮಕ ಮಾತಿನಲ್ಲೇ ಸಮರ್ಥವಾಗಿ ಸೆರೆಹಿಡಿದು ಬಿಟ್ಟಿರುವ ಕಲೆ ನಿಜಕ್ಕೂ ತಲೆದೂಗಿಸುತ್ತದೆ. ಇದರ ರೂಪಕ ಭಾಷೆಯಂತೂ ಪರಿಭಾವಿಸಿದಷ್ಟೂ ಅರ್ಥದ ವಿವಿಧ ಪದರುಗಳನ್ನು ಬಿಚ್ಚಿ ತೋರುವಷ್ಟು ಶಕ್ತಿಶಾಲಿಯಾಗಿದೆ.

ಕಗ್ಗಲ್ಲಿಗೆ ಮುಗ್ಗಲ್ ರಾಗೀಯಿಟ್ಟು

ಈ ಗಾದೆ ಒಂದು ಕುಟುಂಬದ ಅಥವಾ ಒಬ್ಬರ ಮನೆಯ ಅತ್ಯಂತ ದರಿದ್ರ ಸ್ಥಿತಿಯನ್ನು ತಿಳಿಸುತ್ತದೆ. ಮೂಲತಃ ಈ ಗಾದೆಯು ಹುಳ್ಳಿಯ ಸಾರು ಮತ್ತು ರಾಗಿಯ ಮುದ್ದೆಯನ್ನು ಬಳಸುವ ಪ್ರದೇಶದಲ್ಲಿ ಹುಟ್ಟಿದ್ದೆಂದು ಕಾಣುತ್ತದೆ. ಹುರುಳಿಯ ಸಾರು ಮುಖ್ಯವಾಗಿ ಬಡವರು ಬಳಸುವ ಸಾರು, ಸ್ಥಿತಿವಂತರು ಆ ಪದಾರ್ಥವನ್ನು ಆಗಾಗ ಬಳಸಿದರೂ ಮೇಲಿಂದ ಮೇಲೆ ಬಳಸುವುದಿಲ್ಲ. ಆದರೆ ರಾಗಿಯ ಮುದ್ದೆ ಹಾಗಲ್ಲ. ಅದನ್ನು ಸ್ಥಿತಿವಂತರೂ, ಅಸ್ಥಿತಿವಂತರೂ ಎಂಬ ಭೇದ ಭಾವ ಇಲ್ಲದೆ ಬಳಸುತ್ತಾರೆ. ಮುಗ್ಗಲು ರಾಗಿಯ ಹಿಟ್ಟನ್ನು ಬಳಸುವುದಿಲ್ಲ.

ಈ ಗಾದೆಯಲ್ಲಿ ಬಳಕೆಯಾಗಿರುವ ವಸ್ತುಗಳು ಇನ್ನೂ ಕನಿಷ್ಠತಮವಾದವು ಅಂದರೆ ಕಗ್ಗಲ್ಲು ಹುರುಳಿಕಾಳು. ಸಾಮಾನ್ಯವಾಗಿ ಹುರುಳಿ ಕಾಳೇ ಗಟ್ಟಿಯಾಗಿದ್ದು ಅದನ್ನೇ ಅಗಿದು ತಿನ್ನಬೇಕಾಗುತ್ತದೆ. ಅವು ಹಲ್ಲು ಗಟ್ಟಿಯಾಗಿರುವವರಿಗೆ ಮಾತ್ರ ಸಾಧ್ಯ. ಮಧ್ಯೆ ಕಲ್ಲು ಸಿಕ್ಕಿದರೆ ಹಲ್ಲಿನ ಬೇರುಗಳಲ್ಲಿ ಜುಂ ಎನ್ನುತ್ತ ಮೆದುಳಿನ ನರಗಳೆಲ್ಲ ಕೆರಳಿನಿಲ್ಲುತ್ತವೆ. ಮುಖ ಅಸಹ್ಯ ರೂಪ ತಾಳುತ್ತದೆ. ಇಂಥ ಕಗ್ಗಲ್ಲು ಹುರುಳಿ ಕಾಳನ್ನು ನಂಜಿಕೊಳ್ಳುತ್ತ ಅದರ ಸಾರಿನಲ್ಲಿ ಮುಗ್ಗಿದ ರಾಗಿಯ ಹಿಟ್ಟನ್ನು ಹೊರಳಿಸಿ ನುಂಗುವುದು ತುಂಬಾ ಕಷ್ಟ. ಮುಗ್ಗಲು ರಾಗಿಯ ಹಿಟ್ಟು ದುರ್ನಾತ ಹೊಡೆಯುತ್ತದೆ. ಅದನ್ನು ಸೇವಿಸಿದರೆ ಹೊಟ್ಟೆಯನ್ನು ಕೆಡಿಸುತ್ತದೆ. ಊಟ ಬೇಡವೆನಿಸುತ್ತದೆ. ಆದರೆ ಮಾಡುವುದೇನು? ತಾನು ಸೇರಿದ ಮನೆಯ ದಟ್ಟ ದರಿದ್ರಾವಸ್ಥೆಯನ್ನು ಈ ರೂಪಕದ ಮೂಲಕ ತನ್ನ ತವರಿನವರಿಗೆ ಹೇಳಿರಬೇಕು ಅಥವಾ ಆ ಕುಟುಂಬದ ದರಿದ್ರಾವಸ್ಥೆಯನ್ನು ಆಡಿಕೊಳ್ಳಲು ನೆರೆ-ಹೊರೆಯವರು ಈ ರೀತಿ ನುಡಿದಿರಬಹುದು. ಈ ಗಾದೆಯ ದಟ್ಟ ದರಿದ್ರಾವಸ್ಥೆಯ ಪರಮಸೂಚಿ.

ಇದರ ಸಾಹಿತ್ಯ ಶಕ್ತಿ ಮನನೀಯ, ಕಗ್ಗಲ್ಲು, ಮುಗ್ಗಲು ಎಂಬಲ್ಲಿನ ಪ್ರಾಸದ ಜೊತೆಗೆ ಈ ನುಡಿ ದಾರಿದ್ರಾವಸ್ಥೆಯನ್ನು ಕಣ್ಮುಂದಿರಿಸಿದಂತೆ, ಎದೆಗೆರಗಿ ಬಂದ ಸಿಡಿಗುಂಡಿನಂತೆ ನುಡಿಯುತ್ತದೆ. ಧ್ವನಿ ಶಕ್ತಿಯಿಂದ ಪುಟಿಯುತ್ತದೆ. ಒಂದು ಇಡೀ ವಾತಾವರಣದ ಮರ್ಮವನ್ನು ಇದಕ್ಕಿಂತ ಸಂಕ್ಷೇಪವಾಗಿ ಹೇಳಲು ಸಾಧ್ಯವೇ ಇಲ್ಲವೇನೋ ಎಂಬಷ್ಟರ ಮಟ್ಟಿಗೆ ಇದು ರಸವತ್ತಾಗಿದೆ. ಜೊತೆಗೆ ದಿನನಿತ್ಯ ಉಣ್ಣುವ ಊಟದ ಸ್ಥಿತಿಯೇ ಹೀಗಾದರೆ, ಉಡುವ ತೊಡುವ ಸ್ಥಿತಿಗತಿ ಕೇಳಬೇಕೆ? ಅಂಥ ಕುಟುಂಬದ ಜನರ ಮನಸ್ಥಿತಿ ಇನ್ನೆಷ್ಟು ಅತೃಪ್ತಿ, ಅಶಾಂತಿಗಳಿಂದ ತುಂಬಿರಬೇಕು?....... ಹೀಗೆ ಇದು ವಿಚಾರ ಲಹರಿಯನ್ನು ಚಿಮ್ಮುತ್ತದೆ, ಮರುಕ ಹುಟ್ಟಿಸುತ್ತದೆ.

ಸಸಿಲಾಡಿ ಕೊರವನ ತಲೆಗೆ ತಂತು.

ಒಬ್ಬರ ದೆಸೆಯಿಂದ ಇನ್ನೊಬ್ಬರಿಗೆ ಅಪಾಯ ಬಂದುದನ್ನು ಈ ಗಾದೆಯು ತಿಳಿಸುತ್ತದೆ. ಸಸಿಲು ಒಂದು ಜಾತಿಯ ಮೀನು. ಸಣ್ಣಗೆ ಬೆಳ್ಳಗೆ ಬಿನ್ನಾಣಿಯಂತೆ ಬಳುಕುವ ಮೀನು. ತೋರಿಕೆಯಾಸೆಯಿಂದ ನೀರಿನ ಮೇಲುಭಾಗಕ್ಕೆ ಬಂದು ತೇಲಾಡುತ್ತವೆ. ಕೊರವ ಎಂದರೆ ಅದೂ ಒಂದು ಜಾತಿಯ ಮೀನು. ಇದು ಮೇಲೆ ಬರದೆ ಕೆಸರಿನಲ್ಲಿ ಬಿದ್ದುಕೊಂಡಿರುತ್ತದೆ. ಇದು ದಪ್ಪ ಮೀನಾಗಿದೆ. ಯಾವುದೋ ಹಳ್ಳದಲ್ಲೊ, ಗುಂಡಿಯಲ್ಲೊ, ಮಣ್ಣು ಬಾಯಿಯಲ್ಲೊ ಇರುವ ಸಸಿಲು ಮೀನುಗಳು ಒಳಗೆ ಇರಲಾರದೆ ಬಿಸಿಲಿಗೆ ಮೈಕಾಯಿಸಿಕೊಳ್ಳಲೋ ಅಥವಾ ಜನರು ಉಗಿದ ತೊಂಟೆಯನ್ನು ತಿನ್ನಲೊ ಮೇಲೆ ಬರುತ್ತವೆ. ಅದನ್ನು ಕಂಡ ರೈತ ಅಲ್ಲಿ ಮೀನಿವೆ ಎಂದು ಬಗೆದು, ಇತರರೊಡನೆ ಬಂದು ಅಲ್ಲಿಯ ನೀರನ್ನು ಹೊರ ಹಾಕಿ, ಗೂಟೆ ಹಾಕಿ ಸಸಿಲು ಮೀನಿನ ಜೊತೆಗೆ, ಕೆಸರಲ್ಲಿ ಏನೂ ಮಾಡದೆ ಇದ್ದ ಕೊರವ ಮೀನನ್ನೂ ಹಿಡಿದುಕೊಂಡು ಹೋಗುತ್ತಾನೆ. ಇಷ್ಟೆಲ್ಲಾ ಆದದ್ದು ಒಳಗಿರಲಾರದೆ ಹೊರ ನಲಿದ ಸಸಿಲು ಮೀನಿನಿಂದ. ಇದು ಮುಂದುವರಿದು ಬೇರೆ ಅರ್ಥವನ್ನು ನೀಡುತ್ತದೆ. ಅಂದರೆ ಚಿಕ್ಕವರಾಡಿ ದೊಡ್ಡವರ ತಲೆಗೆ ತಂದರು, ಅಥವಾ ಹೆಂಗಸರಾಡಿ ಗಂಡಸರ ತಲೆಗೆ ತಂದರು ಎಂದು. ಇಲ್ಲಿ 'ತಲೆಗೆ ತಂತು' ಎಂದರೆ ಅಪಾಯವನ್ನು, ಮೃತ್ಯವನ್ನು ತಂತು ಎಂದು. ಇಲ್ಲಿ ಪ್ರಾಣಿರೂಪಕದ ಮೂಲಕ ಮನುಷ್ಯ ವ್ಯವಹಾರದ ವಿಷಯವನ್ನು ಅರ್ಥವತ್ತಾಗಿ ನಿರೂಪಿಸಿದೆ.

ಹರಕು ಮರದಲ್ಲೇ ಜೇನಿಕ್ಕೋದು

ಈ ಗಾದೆ ರೂಪಕಾಲಂಕಾರಕ್ಕೆ ಉದಾಹರಣೆಯಾಗಿದೆ. ಆರಕ್ಕೇರದೆ, ಮೂರಕ್ಕೆ ಇಳಿಯದೆ ಬಡವನಂತೆ ಕಾಲ ಹಾಕುವ ವ್ಯಕ್ತಿಯ ಹತ್ತಿರವೇ ದುಡ್ಡಿರುವುದು. ಬಂಡವಾಳವಿರುವುದು ಎಂಬ ಭಾವ ಹೀಗೆ ರೂಪಕದಲ್ಲಿ ಎರಕಗೊಂಡಿದೆ. ಶ್ರೀಮಂತರು ಅಂತಸ್ತನ್ನು ಕಾಪಾಡಿಕೊಳ್ಳುವುದಕ್ಕೋ, ಬಡಾಯಿ ಮಾಡುವುದಕ್ಕೋ ಹೋಗಿ 'ಆಳು ನೋಡಿದರೆ ಅಲಂಕಾರ, ಬಾಳು ನೋಡಿದರೆ ಬಡ್ಕೋಬೇಕು' ಎನ್ನುವಂತಾಗಿರುತ್ತಾರೆ. ಆದರೆ ಅಂತಸ್ತೆಂದು ತಲೆಕೆಡಿಸಿಕೊಳ್ಳದ ಅಹಂಕಾರದಿಂದ ಬೀಗದ ಸಾಮಾನ್ಯ ವ್ಯಕ್ತಿ ತಾನು ಗಳಿಸಿದ್ದನ್ನು ಅಪದ್ಧನವನ್ನಾಗಿ ಇಟ್ಟುಕೊಂಡಿರುತ್ತಾನೆ. ಆದರೆ ಶ್ರೀಮಂತರು ಡಂಭಾಚಾರದವರು; 'ಒಪ್ಪತ್ತಿಗಿದ್ದರೆ ಒಲೆ ಕಿತ್ತುಹಾಕುವವರು' ಜೇನುಹುಳು ಪೊದೆಯಾದ, ಎಲೆಯಿಂದ ಸಮೃದ್ಧವಾದ ಮರದಲ್ಲಿ ಜೇನಿಕ್ಕುವುದಿಲ್ಲ. ಬದಲಾಗಿ ಹರಕಲು ಹರಕಲಾಗಿರುವ ಮರದಲ್ಲಿ ಜೇನಿಕ್ಕುತ್ತದೆ. ಮನುಷ್ಯ ಲೋಕದ ಭಾವ-ಸ್ವಭಾವ, ಸಸ್ಯ-ಪ್ರಾಣಿಲೋಕದ ರೂಪಕದಲ್ಲಿ ಸುಂದರವಾಗಿ ಘನೀಭವಿಸಿರುವುದನ್ನು ಈ ಗಾದೆಯಲ್ಲಿ ಕಾಣುತ್ತೇವೆ.

ಹಾಕ್ಮಣೆ, ನೂಕ್ಮಣೆ, ಯಾಕ್ಮಣೆ

ಪರೀಚಯದ ಪ್ರಾರಂಭ ಅನಂತರದ ಕೆಲವು ದಿನಗಳ ಮತ್ತು ತುಂಬಾ ಹಳತಾದರೆ ಆತಿಥ್ಯದ ಮಟ್ಟ ಯಾವ ರೀತಿ ಇರುತ್ತದೆ ಎಂಬುದನ್ನು ಮೇಲಿನ ಮೂರು ಪದಗಳಿರುವ ಗಾದೆಯು ಧ್ವನಿಸುತ್ತದೆ. ಇಲ್ಲಿ ಮಣೆಯೆಂದರೆ ಕೂರಲು ಬಳಸುತ್ತಿದ್ದ ವಸ್ತು. ಹಿಂದೆ ಇದು ಗೌರವ ಸೂಚಕವಾಗಿತ್ತು. 'ಮಕ ನೋಡಿ ಮಣೆ ಹಾಕ್ತಾರೆ' ಎಂಬ ಗಾದೆಯಂತೆ, ಪರಿಚಯದ ಆರಂಭ ದಿನಗಳಲ್ಲಿ ಅವರು ಬಂದರೆ ಸಡಗರ ಸಂಭ್ರಮ, ಅವರು ಯಾವುದಾದರು ವಿಷಯದಲ್ಲಿ ತಪ್ಪು ತಿಳಿಯಬಹುದು ಎಂದು ಬಂದ ಕೂಡಲೇ ಮಣೆಯನ್ನು ಹಾಕಿ ಉಪಚರಿಸುತ್ತಾರೆ, ಆನಂದವನ್ನು ಅನುಭವಿಸುತ್ತಾರೆ. ಪರಿಚಯವಾಗಿ ಕೆಲವಾರು ದಿನಗಳು ಕಳೆದ ಮೇಲೆ ಆ ವ್ಯಕ್ತಿ ಬಂದರೆ ಮೊದಲಿದ್ದಷ್ಟು ಸಡಗರ ಸಂಭ್ರಮವಿರದ್ದರೂ ಪ್ರೀತಿ ವಿಶ್ವಾಸ ಇರುತ್ತದೆ. ಆ ಮಟ್ಟದಲ್ಲಿ ಮಣೆಯನ್ನು ಹಾಕಬೇಕಿಲ್ಲ. ನೊಕಿದರೆ ಸಾಕು ತೆಗೆದುಕೊಂಡು ಹಾಕಿಕೊಳ್ಳುತ್ತಾರೆ ಎಂಬ ಭಾವ ಎರಡನೆಯ ಪದದಲ್ಲಿ ಇದೆ. ಪರಿಚಯವು ತುಂಬಾ ಹಳೆಯದಾದರೆ ಇವರಲ್ಲೂ ಸಡಗರ ಸಂಭ್ರಮ ಹಳತಾಗಿರುತ್ತದೆ. ಅಂಥ ಸಮಯದಲ್ಲಿ ಮಣೆಯನ್ನು ಹಾಕುವ ಗೋಜಿಗೇ ಹೋಗುವುದಿಲ್ಲ. ಅವರನ್ನು ಬೇಗ ಕಳುಹಿಸುವ ಆಲೋಚನೆಯಲ್ಲಿರುತ್ತಾರೆ. ಪರಿಚಯದ ಪ್ರಾರಂಭ ಅಥವಾ ಹೊಸದರಲ್ಲಿ ವ್ಯಕ್ತಿಗಳಿಗೆ ತೋರುವ ಪ್ರೀತಿ ವಿಶ್ವಾಸದ ಕಾವನ್ನೂ, ಪರಿಚಯ ಸ್ವಲ್ಪ ಹಳತಾದರೆ ಆಗ ತೋರಿಸುವ ಅರ್ಧಂಬರ್ಧ ಕಾತರದ ಕಾಟಾಚಾರದ ಪ್ರೀತಿಯನ್ನೂ, ಪೂರ್ಣ ಹಳತಾದ ಮೇಲೆ ತೋರಿಸುವ ಅಸಡ್ಡೆಯನ್ನೂ–ಒಟ್ಟಿನಲ್ಲಿ ಪರಿಚಯದ ಮೂರು ಹಂತಗಳಲ್ಲಿ ವ್ಯಕ್ತವಾಗುವ ಮಾನವ ಸ್ವಭಾವವನ್ನು ಈ ಗಾದೆ ತುಂಬ ಸುಂದರವಾಗಿ ಮೂರೇ ಮೂರು ಶಬ್ದ ಚಿತ್ರಗಳಲ್ಲಿ ಸೆರೆಹಿಡಿದಿದೆ. ಕೇವಲ ಸಂಭಾಷಣೆಯ ಮೂರು ಮಾತೇ ಹೀಗೆ ರೂಪಕವಾಗಿ ನಿಂತು ಭಾವಸಾಂದ್ರತೆಯ ಮಡುವಾಗಿ, ರಸ ತೊಟ್ಟಿಕ್ಕುವ ತುಡುವೇ ಜೇನಾಗಿರುವುದು. ಸೋಜಿಗಗೊಳಿಸುತ್ತದೆ.

ಹಾದರಗಿತ್ತಿ ನಡುವನೆ ಚಂದ

ಗರತಿ ಕೋಣೆ ಚಂದ

ಹಾದರಗಿತ್ತಿ ಗಿರಾಕಿಗಳನ್ನು ಆಕರ್ಷಿಸಲು ನಡುಮನೆಯನ್ನು ಅಚ್ಚುಕಟ್ಟಾಗಿ ಅಲಂಕರಿಸಿರುತ್ತಾಳೆ; ಥಳಕು ಪಳಕು ಮಾಡಿರುತ್ತಾಳೆ. ಆದರೆ ಕೋಣೆ (ಅಡುಗೆ ಮನೆ) ಕೊಳೆತು ನಾರುವ ಗುಂಡಿಯಾಗಿರಬಹುದು. ಗರತಿಗೆ ಗಂಡ ಮಕ್ಕಳನ್ನುಳಿದು ಬೇರೆಯವರನ್ನು ಮೆಚ್ಚಿಸಬೇಕಾದ ಅಗತ್ಯವಿಲ್ಲವಾದ್ದರಿಂದ, ನಡುಮನೆಗಿಂತ ಕೋಣೆಯನ್ನು ಸ್ವಚ್ಚವಾಗಿ ಇಟ್ಟುಕೊಂಡಿರುತ್ತಾಳೆ. ಕಾರಣ ಗಂಡ ಮಕ್ಕಳ ಆರೋಗ್ಯ ಅವಳಿಗೆ ಮುಖ್ಯ. ಆದರೆ ಹಾದರಗಿತ್ತಿಗೆ ಕೋಣೆಗಿಂತ ನಡುಮನೆಯ ಮಿಣುಕು ಅಗತ್ಯ. ಇಲ್ಲಿ ನಡುಮನೆ ಮತ್ತು ಕೋಣೆ ಮನೆಯ ಬೇರೆ ಬೇರೆ ಭಾಗಗಳನ್ನು ಸೂಚಿಸುವಷ್ಟಕ್ಕೆ ಮಾತ್ರ ಸೀಮಿತವಾಗಿಲ್ಲ. ನಡುಮನೆ ಹಾದರಗಿತ್ತಿಯ ಬಾಹ್ಯ ಶರೀರದ ಅಲಂಕಾರ ಆಕರ್ಷಣೆಗೂ, ಕೋಣೆ

ಗರತಿಯ ಹೃದಯ ಅಲಂಕಾರ ನೈರ್ಮಲ್ಯಕ್ಕೂ ಸಂಕೇತವಾಗಿ ಬಿಡುತ್ತದೆ. ಮೆಲುಕು ಹಾಕಿದಂತೆಲ್ಲ. ಆ ಎರಡು ಶಬ್ದಗಳ ಬಳಕೆ ಎಷ್ಟು ಅರ್ಥಪೂರ್ಣವಾಗಿದೆ ಎನ್ನಿಸುತ್ತದೆ. ಸಾಮಾನ್ಯ ಶಬ್ದಗಳ ಮೂಗು ಹಿಡಿದು ಅಸಾಮಾನ್ಯ ಭಾವಾರ್ಥಗಳ ಬಾಯಿ ಬಿಡಿಸುವ ಇಂಥ ಕಲೆ ಜನಪದ ಅಜ್ಞಾತ ಕವಿಗಳ ಪಿತ್ರಾರ್ಜಿತ ಆಸ್ತಿ.

ಹಾರುವ

ಊರುವ

ಜಾರುವ

ಬ್ರಾಹ್ಮಣರ ಸೋಗಲಾಡಿತನದ ಬುದ್ದಿಯನ್ನು ಕೇವಲ ಮೂರು ಪದಗಳಲ್ಲಿ ಗಾದೆಯು ಹಿಡಿದಿಡುತ್ತದೆ. ಹಾರುವ ಎಂದರೆ ಸಾಮಾನ್ಯವಾಗಿ ತಿರಿಯುವವ ಎಂದರ್ಥ. ಹಿಂದೆ ಬ್ರಾಹ್ಮಣರು ಮನೆ ಮನೆಯಲ್ಲಿ ಬೇಡಿ ಜೀವನ ಸಾಗಿಸುತ್ತಿದ್ದರು. ಆದುದರಿಂದ ಅವರನ್ನು ಹಾರುವರೆಂದು ಕರೆಯಲಾಯಿತು. ಹಾರುವ ಎನ್ನುವ ಪದ ಮತ್ತೊಂದು ಅರ್ಥವನ್ನು ಹೊಂದಿದೆ. ಅಂದರೆ To Jump ಎಂದು. ಇವರು ಸಾಮಾನ್ಯವಾಗಿ ಯಾವ ವಿಷಯದಲ್ಲೂ ಸಿಕ್ಕಿಹಾಕಿಕೊಳ್ಳುವುದಿಲ್ಲ. ಬದಲಾಗಿ ಹಾರಿ ಪಾರಾಗುತ್ತಾರೆ ಎಂಬುದನ್ನು ಮೊದಲನೆಯ ಹಾರುವ ಪದ ತಿಳಿಸುತ್ತದೆ. ಹಾಗೆಯೇ ಊರುವ ಎಂದರೆ ಅವರಿವರ ಮಧ್ಯೆ ದ್ವೇಷದ ಕಿಡಿಯನ್ನು ನೆಡುವ ಬಿತ್ತುವ ಕೆಲಸದಲ್ಲಿ ತೊಡಗಿರುವುದನ್ನು ತಿಳಿಸುತ್ತದೆ. ಮುಂದೆ ಅವರು ಜಾರಿಕೊಳ್ಳುವ ನಿಪುಣತೆಯನ್ನು ಹೊಂದಿದ್ದಾರೆ ಎಂಬುದನ್ನು ಜಾರುವ ಪದ ಸೂಚಿಸುತ್ತದೆ. ಅಂದರೆ ಬ್ರಾಹ್ಮಣರ ಬುದ್ದಿಯನ್ನು, ಅವರು ಕಾರ್ಯವೈಖರಿಯನ್ನು ಈ ಗಾದೆಯ ಮೂರು ಪದಗಳು ಅತ್ಯಂತ ಸಾರ್ಥಕವಾಗಿ ಧ್ವನಿಸುತ್ತವೆ. ಸಂಕ್ಷಿಪ್ತತೆ ಗಾದೆಯ ಒಂದು ಗುಣ. ಅದರಂತೆ ಮೇಲಿನ ಗಾದೆಯು ಸಂಕ್ಷಿಪ್ತತೆಗೆ ಉದಾಹರಣೆಯಾಗಿದೆ.

ಹಗಲೆಲ್ಲ ಹಾದರ ಮಾಡಿ

ಇಳ್ಳು ಬಂದ್ಲಂತೆ ಗಂಡನ ತಲೆ ಹೇನು ನೋಡೋಕೆ.

ಈ ಗಾದೆಯು ಹಾದರಗಿತ್ತಿಯ ಸೋಗಲಾಡಿತನವನ್ನು ಅಥವಾ ಮುಗ್ಧ ಗಂಡಂದಿರ ಕಣ್ಣಿಗೆ ಮಣ್ಣೆರಚಿ ಮರಳು ಮಾಡುವ ಪ್ರೀತಿಯ ನಟನೆಯನ್ನು ವ್ಯಂಗ್ಯದ ಮೊನಚಿನಿಂದ ಅಸದೃಷ್ಯವಾಗಿ ಚಿತ್ರಿಸುತ್ತದೆ. ಏಕೆಂದರೆ ತಲೆಯಲ್ಲಿರುವ ಹೇನು ಕಪ್ಪಾಗಿರುತ್ತದೆ. ತಲೆನೋಡಿ ಅದನ್ನು ಸಾಯಿಸಬೇಕಾದರೆ ಪ್ರಖರವಾದ ಬೆಳಕಿರಬೇಕು. ಅಂದರೆ ಅದು ಹಗಲಲ್ಲಿ ಸಾಧ್ಯ ಅವಳು ಕಪ್ಪಾದ ಹೇನನ್ನು ಹಿಡಿದು

ಸಾಯಿಸಲು ಬಂದಿರುವುದು ಪ್ರಖರವಾದ ಬೆಳಕಿಲ್ಲದ ಕತ್ತಲೆ ಕೆನೆಗಟ್ಟಿರುವ ಇಳ್ಳಲ್ಲಿ. ಕತ್ತಲಲ್ಲಿ ಅಥವಾ ಹಣತೆಯ ಮಂದ ಬೆಳಕಿನಲ್ಲಿ ಕಪ್ಪು ಹೇನು ಕಾಣುವುದೇ? ಆದರೂ ಅವಳು ಬಂದಿರುವುದು ಗಂಡನ ಬಗೆಗೆ ತನಗೆ ಎಷ್ಟೊಂದು ಪ್ರೀತಿಯಿದೆ ಎಂಬುದನ್ನು ತೋರಿಸಿ ಆ ಮುಗ್ದನನ್ನು ಮರಳು ಮಾಡಿ ತನ್ನ ಮಣ್ಣು ತಿನ್ನುವ ಕೆಲಸವನ್ನು ಮುಚ್ಚಿಕೊಳ್ಳಬೇಕು ಎಂದು ಹಗಲು ಹೊತ್ತಿನಲ್ಲಿ ತನ್ನ ಗೈರು ಹಾಜರಿಯ ಬಗೆಗೆ ಗಂಡ ಸಂದೇಹ ಗ್ರಸ್ಥನಾಗಬಾರದು ಎಂದು: ನನ್ನ ಬಗ್ಗೆ ಹೀಗೆ ಪ್ರಾಣ ಇಟ್ಟುಕೊಂಡಿರುವ ಹೆಂಡತಿ ನನಗೆ ದ್ರೋಹ ಬಗೆದು ಅನ್ಯರಿಗೆ ಸೆರಗು ಹಾಸಲು ಹೋಗುವುದುಂಟೇ? ಕೇವಲ ಸರೀಕ ಹೆಂಗಸರೊಡನೆ ಹರಟೆ ಕೊಚ್ಚಿ ತನ್ನ ಬೇಸರವನ್ನು ಕಳೆದುಕೊಳ್ಳಲು ಹಗಲು ಹೊತ್ತು ಅವರಿವರ ಮನೆಗೆ ಹೋಗುತ್ತಾಳೆ ಎಂದು ಭಾವಿಸುವಂತಾಗಬೇಕು ಎಂದು ಇಂಥ ಸೋಗಲಾಡಿತನವನ್ನು ಗಾದೆ ಮೊನಚಾದ ವ್ಯಂಗ್ಯದ ಮೂಲಕ ತುಂಬಾ ಪರಿಣಾಮಕಾರಿಯಾಗಿ ಅನಾವರಣ ಮಾಡುತ್ತದೆ.

ಹಸು ಸಾಯ್ವಾಗ

ಕರುವಿನ ಬಾಯಿಗೆ ಹುಲ್ಲಿಕ್ಕಿ ಸಾಯ್ತದ

ಯಾರು ಸತ್ತರೂ ಜೀವನ ಸ್ಥಗಿತವಾಗುವುದಿಲ್ಲ; ಪ್ರಪಂಚ ಪ್ರಳಯವಾಗುವುದಿಲ್ಲ; ನಿಸರ್ಗ ನಿಯಮವೇ ಬದುಕುವ ಬಗೆಯನ್ನು ರಕ್ತಗತವಾಗಿಸಿರುತ್ತದೆ. ಯಾರು ಯಾರಿಗೂ ಹೇಳಿಕೊಡಬೇಕಾಗಿಲ್ಲ. ತಾವಾಗಿಯೇ ಹಸಿವು, ತೃಷ, ಕಾಮ, ಸಂತೃಪ್ತಿಯ ಮಾರ್ಗಗಳನ್ನು ನೈಸರ್ಗಿಕವಾಗಿ ಕಲಿತುಕೊಳ್ಳುತ್ತಾರೆ ಎಂಬ ಸತ್ಯವನ್ನು ಸಮರ್ಥವಾಗಿ ಸಚಿತ್ರವಾಗಿ ಅನಾವರಣ ಮಾಡುತ್ತದೆ ಗಾದೆ. ಅಂದರೆ ಸಾಯುವ ಹಸು ತನ್ನ ಕರುವಿಗೆ ಹುಲ್ಲು ತಿನ್ನುವುದು ಗೊತ್ತಿಲ್ಲ; ಆದ್ದರಿಂದ ಕಲಿಸಿ ಹೋಗಬೇಕು ಎಂದು ಅದರ ಬಾಯಿಗೆ ಹುಲ್ಲಕ್ಕಿ ಸಾಯದಿದ್ದರೂ ಹಸಿದ ಕರು ತಾನಾಗಿಯೇ ನೈಸರ್ಗಿಕವಾಗಿ ಹುಲ್ಲು ತಿಂದು ನೀರು ಕುಡಿದು ಹಸಿವು ತೃಷೆಗಳನ್ನು ಹೋಗಲಾಡಿಸುತ್ತದೆ ಎಂಬ ಪ್ರಾಣಿಲೋಕದ ಚಿತ್ರದೊಂದಿಗೆ ಮನುಷ್ಯ ಲೋಕದ ಜೀವನ ಸತ್ಯವನ್ನು ಅನಾವರಣ ಮಾಡುತ್ತದೆ ಗಾದೆ.

ಹತ್ತಿರದಲ್ಲಿದ್ದರೆ ಅಡಕನಾತ

ದೂರದಲ್ಲಿದ್ದರೆ ಧೂಪದ ಗಮನ.

ಯಾವುದಾದರೂ ಒಂದು ವಸ್ತುವಿನ ಬೆಲೆ ಗೊತ್ತಾಗಬೇಕಾದರೆ ಅದು ಕಳೆದು ಹೋಗಿರಬೇಕು: ಇಲ್ಲವೇ ದೂರದಲ್ಲಿರಬೇಕು. ಹತ್ತಿರದಲ್ಲಿದ್ದಾಗ ಸಲಿಗೆಯ ಕಾರಣವಾಗಿ ಆದರ ನಿಜವಾದ ಬೆಲೆಯನ್ನು ಮರೆತಿರುತ್ತೇವೆ. ಹಾಗೆಂದ ಮಾತ್ರಕ್ಕೆ ಬೆಲೆ ಹೋಗಿರುತ್ತದೆ ಎಂಬ ಭಾವವಲ್ಲ. ಅದರ ಅರಿವು ಇರುವುದಿಲ್ಲ

ಎಂಬ ಅರ್ಥ ಅಷ್ಟೆ. 'ಹಿತ್ತಲಗಿಡ ಮದ್ದಲ್ಲ' ಎಂಬ ರೀತಿಯಲ್ಲಿ ಇರುತ್ತದೆ ಇದು. ಅಗಲಿಕೆಯಲ್ಲಿರಬಹುದಾದ ಉತ್ಕಟತೆ ಹಾಗೂ ಅವಶ್ಯಕತೆ ಎದುರಿಗಿದ್ದಾಗ ಕಾಣಬರುವುದಿಲ್ಲ. ನಿತ್ಯದ ಬದುಕಿನ ಕಷ್ಟ ನಷ್ಟಗಳಲ್ಲಿ ನಡೆವಾಗ ಕಲಹ ಮನಸ್ತಾಪಗಳು ಉದ್ಭವಿಸುವುದು ಸಹಜ ಸಾಮಾನ್ಯ. ಹೀಗೆ ಬೇಕಾದವರ ಬಗ್ಗೆ ಬೇಗೆಯನ್ನು ಕಾರಿದಾಗ ಈ ಮಾತು ಪುಟಿಯುತ್ತದೆ. ಸತಿ–ಪತಿಯರ, ತಾಯಿ–ಮಕ್ಕಳ ನಡುವೆ ಜಗಳವಾದಾಗ ಸಾಮಾನ್ಯವಾಗಿ ಈ ಮಾತು ಹೊರ ಹೊಮ್ಮುತ್ತದೆ. 'ಇದ್ದರೆ ಕಣ್ಣುರಿ ಹೋದರೆ ಹೋಟ್ಟೆಯುರಿ' ಎಂಬ ಮತ್ತೊಂದು ಗಾದೆ ಕೂಡ ಬೇರೊಂದು ರೀತಿಯಲ್ಲಿ ಇದೇ ಅರ್ಥವನ್ನು ಪೋಷಿಸುತ್ತದೆ. ಇದರ ಹಿಂದೆ ಅಗಾಧ ಪ್ರೀತಿ ವಾತ್ಸಲ್ಯಗಳು ತುಂಬಿಕೊಂಡಿರುತ್ತವೆ ಎಂಬುದನ್ನು ಮರೆಯಲು ಸಾಧ್ಯವಿಲ್ಲ. ಸಾರ್ವತ್ರಿಕವಾಗಿ ಕೂಡ ಇದರ ಅರ್ಥ ಗಮನಾರ್ಹ ದೂರದಲ್ಲಿದ್ದರೆ ಆತನ ಆಚಾರ–ವಿಚಾರಗಳ ಬಗ್ಗೆ ನಮಗೇನು ಅಷ್ಟಾಗಿ ಗೊತ್ತಿರದೆ ಇರುವುದರಿಂದ ಎಂದೋ ಒಂದು ಸಾರಿ ಭೇಟಿಕೊಟ್ಟು ಸ್ನೇಹ ಸಿಂಚನ ಮಾಡಿ ಹೋಗುವುದರಿಂದ ಆತ 'ಧೂಪದ ಗಮನವಾಗಿಯೇ ಉಳಿದುಕೊಳ್ಳುವ ಸಾಧ್ಯತೆಯುಂಟು. ಆದರೆ ಹತ್ತಿರದಲ್ಲಿದ್ದಾಗ ಆತನ ಇತೋಪತಿಶಯವೆಲ್ಲ ಗೋಚರವಾಗಿ ವ್ಯವಹಾರಿಕವಾಗುವುದರ ಮೂಲಕ 'ಅಡಕನಾತ' ವಾಗಲೂ ಬಹುದು. ಅಂತು ಈ ಮಾತಿನಲ್ಲಿ ಅರ್ಥದ ಒತ್ತಡ ಇರುವಂತೆಯೇ ಶಕ್ತ ಅಭಿವ್ಯಕ್ತಿಯೂ ಇದೆ. ಎಲ್ಲಕ್ಕಿಂತ ಹೆಚ್ಚಾಗಿ ಒಳ್ಳೆಯ ಕವಿತೆಯಾಗಿದೆ. 'ಧೂಪ' ಎಂದ ತಕ್ಷಣ ಪರಿಶುದ್ಧತೆ ಮತ್ತು ಸಂತುಷ್ಟಿಯ ಸಂಕೇತವಾಗುತ್ತದೆ. ಆ ಮಾತಿನ ಮೂಲಕವೇ ಆ ಗಮನ (ಪರಿಮಳ) ಪ್ರಸಾರವಾಗುತ್ತದೆ. 'ಅಡಕನಾತ' ಎಂಬುದೂ ಅಷ್ಟೆ ಅಡಕವಾದ ಮಾತು. ಹೀಗೆ ಇದೊಂದು ಸುಂದರವಾದ ಗಾದೆ ಎಂದು ಹೇಳಬೇಕಾಗುತ್ತದೆ.

### ಹೆಂಟೆ ಕೈಲಾಡಿ ಕಲ್ಲು ಹಗುರಾಯ್ತು

ಈ ಗಾದೆಯಲ್ಲಿ ಮಾರ್ಮಿಕ ಬೋದೆ ಲೋಕ ಸತ್ಯ ಹಾಗೂ ಧ್ವನಿಶಕ್ತಿಗಳನ್ನು ಗಮನಿಸಬಹುದು. ಮಣ್ಣು ಹೆಂಟೆಯ ಸ್ವಭಾವ ಒಡೆದು ಹೊಂದಿಕೊಳ್ಳುವುದು. ಅದು ಅನಿಶ್ಚಿತ ಸ್ವರೂಪದ್ದು. ತೋರಿಕೆಗೆ ಮಾತ್ರ ಗಟ್ಟಿಯಾಗಿರುವಂತೆ ತೋರುವಂಥದು. ಒಂದೇಟು ಬಿದ್ದರೆ, ನಾಲ್ಕು ಹನಿ ನೀರು ಬಿದ್ದರೆ ಅದರ ರೂಪ ಬಣ್ಣ ಬದಲಾಗುತ್ತದೆ. ಕಲ್ಲು ಹಾಗಲ್ಲ. ಅದು ಸಾಕಷ್ಟು ಬಲವಾಗಿರುತ್ತದೆ. ಸತ್ಯ, ವ್ಯಕ್ತಿತ್ವಗಳನ್ನು ಪಡೆದುಕೊಂಡಿರುತ್ತದೆ. ಆದರೆ ಸಹವಾಸ ದೋಷದಿಂದ ಹೆಂಟೆಯೊಡನಾಡಿದ ಕಲ್ಲು ದಿನ ದಿನಕ್ಕೆ ತಾನು ತೂಕ, ರೂಪ ಕಳೆದು ಕೊಂಡು ಹಗುರಾಗುತ್ತದೆ.

ಈ ಗಾದೆಯ ವ್ಯಾಜ್ಯಾರ್ಥ ಅದಾದರೆ, ಅದರ ಧ್ವನಿಯೇ ಬೇರೆ, ಸಣ್ಣತನದ ವ್ಯಕ್ತಿಗಳೊಡನಾಡಿದ ದೊಡ್ಡತನದ ವ್ಯಕ್ತಿಯ ಗುಣ, ಮರ್ಯಾದೆಗಳು ದಿನ ದಿನಕ್ಕೆ ಕುಗ್ಗುತ್ತವೆ. 'ಸಂಗದಂತೆ ಬುದ್ಧಿ, ತಿಂಡಿಯಂತೆ ಲದ್ದಿ' 'ಸಹವಾಸ ದೋಷದಿಂದ ಸನ್ಯಾಸಿ ಕೆಟ್ಟ' ಎಂಬ ಗಾದೆಯ ಅಭಿಪ್ರಾಯವೂ ಇದೆ.

ಆದರೂ ಮೊದಲ ಗಾದೆಯ ಧ್ವನಿಶಕ್ತಿ ವಿನೂತನವಾದುದು. ಸರ್ವಜ್ಞ 'ಕಳ್ಳ ನೊಡನಾಡೆ ಅವ ಶುದ್ಧ ಕಳ್ಳನೇ ಅಕ್ಕು' ಎಂದಿರುವುದಾದರೂ ಇದೇ ಅಭಿಪ್ರಾಯ ಸೂಚಿಸಲು. ಆದರೆ ಆ ನುಡಿಗಳೆಲ್ಲ ವಾಚ್ಯ ನುಡಿಗಳು ಪರಿಣಾಮದ ಧ್ವನಿ ಮೊನೆ ಮುಂದಿರುವಂಥವು. ಹಗುರ ಗುಣ. ಚಾರಿತ್ಯದ ವ್ಯಕ್ತಿಗಳ ಸಹವಾಸದಿಂದ ಒಬ್ಬ ಘನತೆವೆತ್ತ ವ್ಯಕ್ತಿಯ ಮುಖ್ಯ ಗುಣಗಳಿಗೇ ಭಂಗ ಬರುತ್ತದೆಂಬುದನ್ನು ಹೆಂಟೆ ಕಲ್ಲುಗಳ ಒಡನಾಟದ ಚಿತ್ರದಿಂದ ಸೂಚಿಸಲಾಗಿದೆ. ಈ ಸೂಚ್ಯ ಗುಣ ಸಾಹಿತ್ಯಕ ಮೌಲ್ಯದ ಮುಖ್ಯ ಮಾಪಕ.

ಹೂವಿಗೆ ಹೋದ ಹೋನ್ನೆಗೌಡ

ಮದುವೆಯಾದ ಆರು ತಿಂಗಳಿಗೆ ಬಂದ.

ಮದುವೆಗೂ ಹೂವಿಗೂ ಸಂಬಂಧವಿದೆ. ಶಾಸ್ತ್ರ ಸಂಬಂಧಕ್ಕೆ ಅಥವಾ ಹೆಣ್ಣು ಗಂಡಿನ ಕೊರಳಿಗೆ ಹಾರ ಹಾಕಲಿಕ್ಕೆ ಹೂವಿನ ಅವಶ್ಯಕತೆ ಇದೆ. ಅದಕ್ಕೋಸ್ಕರವಾಗಿ ಸಾಲದೇ ಬಂದ ಹೂವಿಗೋ ಅಥವಾ ಹೂವಿನ ಹಾರಕ್ಕೋ ಒಬ್ಬನನ್ನು ಕಳುಹಿಸುತ್ತಾರೆ. ಹೆಣ್ಣು ಗಂಡಿನ ಮೆರವಣಿಗೆ ಹೊರಡುವ ಹೊತ್ತಿಗೆ ಪಕ್ಕದ ಪೇಟೆ ಅಥವಾ ನಗರದಿಂದ ತಂದು ಬಿಡು ಎಂದು. ಆದರೆ ಹೋದಾತ 'ಎಮ್ಮೆ ಮೇಲೆ ಮಳೆ ಹುಯ್ದಂಥ' ವನು. ಅವನು ಆ ಎಲ್ಲ ಕಾರ್ಯಕ್ರಮ ಮುಗಿದ ಮೇಲೆ ಹೂವು ತೆಗೆದುಕೊಂಡು ಬರುತ್ತಾನೆ. ಅವನು ತೀರ ತಡವಾಗಿ ಬಂದದ್ದನ್ನು 'ಮದುವೆಯಾದ ಆರು ತಿಂಗಳಿಗೆ ಬಂದ' ಎಂಬ ಅತಿಶಯೋಕ್ತಿಯ ಮುಖಾಂತರ ಅಭಿವ್ಯಕ್ತಿಗೊಳಿಸಲಾಗಿದೆ. ಅತ್ಯಂತ ತುರ್ತಾಗಿ ಬೇಕಾದ ವಸ್ತುವನ್ನು ತರಲು ಕಳಿಸಿದ ವ್ಯಕ್ತಿ ತಡವಾಗಿ ಬಂದ್ದದ್ದನ್ನು ಗೇಲಿ ಮಾಡುತ್ತದೆ ಈ ಗಾದೆ.

ದೊರೆ ಬಂದ ಬಗ್ಗು

ಬಂದ್ರೆ ಬಂದ ತಿಕ್ಕು

ಪ್ರತಿಭಟನೆ ಸಾಹಿತ್ಯದ ಒಂದು ಮುಖ್ಯ ಅಂಶ. ಅದೇ ರೀತಿ ಈ ಗಾದೆಯು ಪ್ರತಿಭಟನೆಯನ್ನು ತಿಳಿಸುತ್ತದೆ. ದೊರೆ ಒಂದು ಸಾಮ್ರಾಜ್ಯದ ಒಡೆಯ. ಆತ ಜನ ಸಾಮಾನ್ಯರನ್ನು ತನ್ನ ನಿಯಂತ್ರಣದಲ್ಲಿ ಇಟ್ಟುಕೊಂಡಿರುತ್ತಾನೆ. ಆತ ಮಾಡಿದ್ದೇ ಕಾನೂನು. ಹೇಳಿದ್ದೇ ನಿಯಮ. ಆದುದರಿಂದ ಅವನನ್ನು ಕಂಡರೆ ಜನರಿಗೆ ಭಯ ಮಿಶ್ರಿತ ಭಕ್ತಿ. ಗೌರವ, ಆತನಿಗೆ ಗೌರವ ಕೊಡಬೇಕು ಎಂಬುದು ಜನರ ನಂಬಿಕೆ. 'ರಾಜ ಪ್ರತ್ಯಕ್ಷ ದೇವ' ಎಂಬುದಾಗಿ ಈ ದೊರೆಗಳೂ ಪ್ರಚಾರ ಮಾಡಿದ್ದಾರೆ. ಈ ಕಾರಣದಿಂದ ಜನಸಾಮಾನ್ಯರು ಭಕ್ತಿಯನ್ನು ತೋರಿಸುತ್ತಾರೆ. ದೊರೆ ಬಂದಾಗ ಬಗ್ಗೆ ನಮಸ್ಕರಿಸಬೇಕು ಎಂಬುದು ನಿಯಮ ಇಲ್ಲಿ 'ಬಗ್ಗು'

ಎಂಬುದು ಗುಲಾಮ ಗಿರಿಯ, ಅತಿಯರಳುತನದ ಸಂಕೇತ. ಈ ಗಾದೆಯು ಈ ಗುಲಾಮ ಗಿರಿತನವನ್ನು, ದೊರೆಯ ಬಗ್ಗೆ ಅಲಕ್ಷ ಭಾವನೆಯನ್ನು ಹೊಂದಿರುವುದು ತಿಳಿಯುತ್ತದೆ. ದೊರೆ ಬಂದಾಗ ಅವನಿಗೆ ನಮಸ್ಕರಿಸಿದರೆ ಕಷ್ಟ ನಿವಾರಣೆಗೆ ಆಗುವುದಿಲ್ಲ. ಬದಲಾಗಿ ನಮ್ಮ ಪಾಡು ನಮಗೆ ನಮಗೆ ಇದ್ದೆ ಇರುತ್ತದೆ. 'ರಾಮನಿಗೆ ರಾಜ್ಯ ಬಂದರೆ ರಾಗಿ ಬೀಸೋದು ತಪ್ಪಲ್ಲ' ಎಂಬ ಗಾದೆಯಂತೆ. ಆದುದರಿಂದ ಬಂದವನು ಹೋಗುತ್ತಾನೆ. ನಿನ್ನ ಕೆಲಸ ನೀನು ಮಾಡು ಎಂಬ ಪ್ರತಿಭಟನೆಯ ಅಂಶ ಗಾದೆಯಲ್ಲಿ ಅಡಕವಾಗಿರುವುದನ್ನು ಇಲ್ಲಿ ಕಾಣಬಹುದು.

ಮಾತಿಗೆ ತಪ್ಪೋನೆ ಮಾದಿಗ

ಹೊಲಸು ತಿನ್ನೋನೆ ಹೊಲೆಯ

ಸಮಾಜದ ಮೇಲು ಕೀಳುಗಳನ್ನು ನಿರ್ಧರಿಸುವ ಅಂಶಗಳನ್ನು ಈ ಗಾದೆಯು ಕಾವ್ಯಾತ್ಮಕವಾಗಿ ತಿಳಿಸಿದೆ. ಜಾತಿ ಎನ್ನುವುದು ಹುಟ್ಟಿನಿಂದ ಬಂದದ್ದಲ್ಲ. ಆತನ ಕಾಯಕದ ಆಧಾರದ ಮೇಲೆ ರಚಿತವಾದುದು ಎಂಬುದು ತಿಳಿದಿದೆ. ಅದನ್ನೇ ಧ್ವನಿಸುತ್ತದೆ ಈ ಗಾದೆಮಾತು ಬಹು ಮುಖ್ಯವಾದುದು. ಇದನ್ನು ವಚನ ಎಂದು ಕರೆಯುತ್ತಾರೆ. ಯಾರಾದರು ಒಬ್ಬರಿಗೆ ಮಾತುಕೊಟ್ಟರೆ ಅದರಂತೆ ನಡೆಯಬೇಕು ಇಲ್ಲದಿದ್ದರೆ ವಚನ ಭ್ರಷ್ಟರಾಗುತ್ತಾರೆ. ಇಂಥವನನ್ನು ಮಾದಿಗ ಎಂದು ಗುರುತಿಸಿದೆ. ಹಾಗೆಯೇ ತಿನ್ನಲು ಯೋಗ್ಯವಾದ ವಸ್ತುವನ್ನು ಮಾತ್ರೆ ತಿನ್ನಬೇಕು. ಅದನ್ನು ಬಿಟ್ಟು ಸಿಕ್ಕಿದ್ದನ್ನೆಲ್ಲ ತಿಂದರೆ ಆರೋಗ್ಯ ಕೆಡುತ್ತದೆ. ಇಂಥವರನ್ನು ಹೊಲೆಯರು ಎನ್ನುತ್ತಾರೆ. ಈ ರೀತಿ ಗಾದೆಯು ಧ್ವನಿಸುತ್ತದೆ.

ಸಗಣಿಲಿ ಸಾವಿರ ಹುಳ ಇದ್ದರೂ

ಸಂಜೆ ಹೊತ್ತಿಗೆ ಮರಣ.

ಸಗಣಿಯಲ್ಲಿ ಸಾವಿರ ಹುಳ ಇದ್ದರೂ ಏನೂ ಪ್ರಯೋಜನವಿಲ್ಲ. ಅವು ಅಲ್ಪಾಯುಷಿಗಳು. ಅವುಗಳಿಗೆ ಸಂಜೆಯ ವೇಳೆಗೆ ಮರಣ ಕಟ್ಟಿಟ್ಟ ಬುತ್ತಿ ಎಂಬುದು ಗಾದೆಯ ವಾಚ್ಯಾರ್ಥ. ಅದರ ಉದ್ದೇಶಿತಾರ್ಥ ಆಶಕ್ತರಾದರು ಎಷ್ಟುಜನ ಇದ್ದರೆ ಏನು? ಅದರಿಂದ ಏನೂ ಪ್ರಯೋಜನವಿಲ್ಲ ಎಂಬುದು. ಹೀಗೆ ಈ ಗಾದೆಯ ಪ್ರಾಣಿರೂಪಕ ಮೂಲಕ ಮನುಷ್ಯ ಪ್ರಪಂಚದ ವ್ಯವಹಾರವನ್ನು ತಿಳಿಸುತ್ತದೆ.

ಅತ್ತೆ ಸಾಲು ಸೊಸೆ.

ಇದೊಂದು ಅರ್ಥ ಗರ್ಭಿತವಾದ ಗಾದೆ. ಆಕಾರಲ್ಲಿ ವಾಮನನಂತಿದ್ದರೂ ಅರ್ಥದಲ್ಲಿ ತ್ರಿವಿಕ್ರಮನಂತಿರುವ ಗಾದೆ. ಒಂದು ಹೆಣ್ಣು ಮಗುವಾಗಿ, ಮಗಳಾಗಿ, ಅಕ್ಕ ತಂಗಿಯಾಗಿ, ಹೆಂಡತಿಯಾಗಿ, ಅತ್ತೆ, ಸೊಸೆಯಾಗಿ ಕಾರ್ಯವಹಿಸುತ್ತಾಳೆ. ಅತ್ತೆ ತನ್ನ ಮಗನಿಗೆ ಹೆಣ್ಣನ್ನು ತಂದರೆ ಆಕೆ ಸೊಸೆಯಾಗುತ್ತಾಳೆ. ಮುಂದೆ ಈ ಸೊಸೆಯೇ ತನ್ನ ಮಗನಿಗೆ ಮದುವೆ ಮಾಡಿದರೆ ಈಕೆ ಅತ್ತೆಯಾಗುತಾಳೆ. ಆಕೆ ಸೊಸೆಯಾಗುತ್ತಾಳೆ. ಈ ರೀತಿ ಮುಂದುವರೆಯುತ್ತದೆ. ಅತ್ತೆಯಾದವಳು ಅಧಿಕಾರ ದರ್ಪದಿಂದ ಸೊಸೆಯನ್ನು ಅಡಿಯಾಳಾಗಿ ಮಾಡಿಕೊಂಡಿರುತ್ತಾಳೆ. ಅಥವಾ ಸೊಸೆಯೇ ಅತ್ತೆಯನ್ನು ಆಟವಾಡಿಸುತ್ತಿರಬಹುದು. ಇದೂ ಕೂಡ ಮುಂದುವರೆಯುತ್ತದೆ ಎಂಬುದನ್ನು ಈ ಗಾದೆಯು ತಿಳಿಸುತ್ತದೆ.

ಅರೀದುಡುಗಾರಂಬ ಮಾಡಿ

ವಡೇವಲಾಕೂದ್ಮೆದೇ ಆಕ್ದ.

ಇದು ಶುದ್ಧಾಂಗವಾಗಿ ಜನಪದ ಗಾದೆ. ಜಾನಪದರ ರೂಢಿಗತ ಬೇಸಾಯದ ಅನುಭವ, ವಿವೇಕಗಳಿಲ್ಲದ ಹುಡುಕಬುದ್ದಿ ಬೇಸಾಯ ಕೆಡಿಸುತ್ತದೆ. ಎಂಬ ತತ್ವವನ್ನು ಈ ಗಾದೆ ತುಂಬ ಧ್ವನಿಪೂರ್ಣವಾಗಿ ಸಾರುತ್ತದೆ. ಈ ಗಾದೆಯ ಮೊದಲನೆಯ ಪದವೇ 'ಅರೀದುಡುಗ' ಆತ ತಿಳುವಳಿಕೆಯಿಲ್ಲದ ಇನ್ನೂ ಹುಡುಗ ಪ್ರಾಯದವನು. ಆದ್ದರಿಂದಲೇ ಆತನಿಗೆ ವಿವೇಕ ಕಡಮೆ. ಉತ್ಸಾಹ ಮಾತ್ರ ಅತಿ ಹೆಚ್ಚು, ಅನುಭವಿತರಾದ ವಯಸ್ಕ ರೈತರ ಮಾತು, ಕೃತಿಗಳಲ್ಲಿ ಆತನಿಗೆ ನಂಬಿಕೆ ಕಡಮೆ. ಬದಲಾಗಿ ನಾನೇ ಏಕೆ ಬೇಸಾಯ ಮಾಡಿ ಬೇಗ ಬೇಗ ಹೆಚ್ಚು ಬೆಳೆದು ಎಲ್ಲರಿಂದಲೂ ಸೈ ಎನಿಸಿಕೊಳ್ಳಬಾರದು? ಎಂಬ ತವಕ. ಆದ್ದರಿಂದ ಆತ ಉತ್ಸಾಹದಿಂದಲೇ ಬೇಸಾಯ ಕಾರ್ಯ ಮಾಡಿರಬೇಕು. ಬೆಳೆಯೂ ಸುದೈವದಿಂದ ಚೆನ್ನಾಗಿಯೇ ಬಂದಿರಬೇಕು. ಕುಯ್ಯುವ ಕಾಲ ಬರಲು ಇನ್ನೂ ತುಂಬ ದಿನಗಳಿವೆ. ಆದರೆ ಈ ಹುಡುಗನಿಗೆ ಅಷ್ಟೊಂದು ತಾಳ್ಮೆ ಎಲ್ಲಿದೆ? ಆದಷ್ಟು ಬೇಗ ಕುಯ್ದು. ದೊಡ್ಡಮೆದೆ ಹಾಕಬೇಕು. ಬೇಗ ಒಕ್ಕಿ. ಹೆಚ್ಚು ಧಾನ್ಯವನ್ನು ಮನೆಗೆತ್ತಿಕೊಂಡು ಹೋಗಬೇಕು ಎಂಬ ಆಸೆ. ಆದ್ದರಿಂದ ತೆನೆಯ ಹೊಲಬಣ್ಣವನ್ನು ಕಂಡ, ಕಂಡವನೇ ಕುಯ್ಲಿಗೆ ಆರಂಭಸಿಬಿಟ್ಟ. ಎಲ್ಲವನ್ನು ಕುಯ್ದು ಅದು ಒಣಗಲೂ ಬಿಡದೆ ತಂದು ಮೆದೆ ಹಾಕಿಬಿಟ್ಟ. ಅದೆಲ್ಲದರ ಪರಿಣಾಮ? ಕಂಡ ಕಂಡವರೆಲ್ಲ ಬಿದ್ದು ಬಿದ್ದು ನಗುವಂಥ, ಬಾಯಿಗೆ ಬಂದಂತೆ ಬಯ್ಯುವಂಥ, ಕೈ ಮೀರಿ ನಡೆದುಹೋದಂಥ ಅಭಾಸ, ಅಚಾತುರ್ಯ ಕಾರ್ಯ.

ಇನ್ನೂ ಕಾಳು ಬಲಿಯದ ಹೊಡೆ ಎಲ್ಲವೂ, ಹಸಿಯಾದ ಬೆಳೆ ಎಲ್ಲವೂ ಮೆದೆಯ ಅಡಕುಕಾವಿಗೆ ಕೊಳೆತು ನಾತ ಬರುತ್ತದೆ; ಬೂಷ್ಟು ಹಿಡಿದು ಹೊಗೆಯಾಡುತ್ತದೆ. ತಿನ್ನುವ ಅನ್ನವೆಲ್ಲ ಮಣ್ಣಾಗುತ್ತದೆ. ಅಂಥ ಕೊಳೆತ ಹುಲ್ಲು ದನ ಕರುವಿಗೂ ಪ್ರಯೋಜನವಾಗುವುದಿಲ್ಲ. ಎಲ್ಲ ವ್ಯರ್ಥ: ಬಟ್ಟ ಬರಿಗೈ. ಇದೆಲ್ಲ

ಅರಿಯದ ಹುಡುಗನ ಆರಂಭದ ಮೊದಲ ಫಲ. ಆ ಹುಡುಗ ಮತ್ತೆಂದೂ ಅಂಥ ಅವಿವೇಕ ಕಾರ್ಯಕ್ಕೆ ದುಡುಕಿ ಕೈ ಹಾಕಲಾರ.

ಈ ಗಾದೆಯಲ್ಲಿ ಸಾಹಿತ್ಯವಲ್ಲಿದೆ? ಎಂದು ಕೇಳಬಹುದು. ಇದರ ಅನುಪ್ರಾಸ ಸ್ವಾರಸ್ಯ ಗಮನಿಸಿ. ಅರೀದುಡುಗ ಆರಂಭ, ಎನ್ನುವಲ್ಲಿನ ಒಳಪ್ರಾಸದಂತೆಯೇ ಮಾಡಿ ವಡೇ ಎಂಬಲ್ಲಿಯೂ ಅನುಪ್ರಾಸದ ಸುಳಿವಿದೆ. ಇದಕ್ಕಿಂತ ಮಿಗಿಲಾಗಿ ಇದರ ಧ್ವನಿಶಕ್ತಿ ಮನನೀಯ. ಅವಿವೇಕಿ ಹುಡುಗ ಅಕಾರ್ಯ ಮಾಡಿದನೆಂದು ವಾಚ್ಯವಾಗಿ ಹೇಳಿ ಬಿಡದೆ ವಡೆ ಹೊಲವನ್ನು ಕುಯ್ದು ಮೆದೆ ಹಾಕಿದನೆಂದು ಹೇಳುವಲ್ಲಿ ಅನನ್ಯ ಸೊಗಸಿದೆ, ಸಾಹಿತ್ಯವಿದೆ. ಅವಿವೇಕದ ಬಿಸಿಯನ್ನು ಮನಮುಟ್ಟಿಸುವಂಥ ಕಸುವು ಆ ನುಡಿಗಟ್ಟಿಗಿದೆ ಎಂಬುದು ವೇದ್ಯವಾಗುತ್ತದೆ.

ಕೊಡ್ಲಿಗೆ ಹೆದರದ ಮರ, ಕೊಡ್ಲಿ ಕಾವಿಗೆ ಹೆದರಿತಂತೆ.

ಕೊಡಲಿ ಮುಂದೆ ಚೂಪಾದ ಹರಿತವಾದ ತರಿಯುವ ಸಾಧನ. ಆದುದರಿಂದ ಮರ ಮುಖ್ಯವಾಗಿ ಹೆದರಬೇಕಾದದ್ದು ಕೊಡಲಿಗೆ. ಕಾರಣ ತರಿಯುವ ಸಾಧ್ಯತೆ ಇದೆ. ಆದರಿಂದ ನೋವಾಗುತ್ತದೆ ಎಂದು. ಆದರೆ ಮರ ಇಲ್ಲಿ ಹೆದರಿರುತ್ತಿರುವುದು ಕೊಡಲಿಗಲ್ಲ, ಕೊಡಲಿ ಕಾವಿಗೆ. ಕಾವು ಎಂದರೆ ಕೊಡಲಿಗೆ ಹಿಡಿದುಕೊಂಡು ತರಿಯಲು ಸಹಾಯವಾಗುವಂತೆ ಹಾಕುವ ಸಣ್ಣ ಮರದ ತುಂಡು. ಇದು ಯಾವುದೇ ರೀತಿಯ ಅಪಾಯಕಾರಿಯಲ್ಲ. ಏಕೆಂದರೆ ಇದು ಅಪಾಯ ಮಾಡುವ ಯಾವುದೇ ಅಂಶವನ್ನು ಹೊಂದಿಲ್ಲ. ಆದ್ದರಿಂದ ಹೆದರುವ ಅವಶ್ಯಕತೆ ಇಲ್ಲ. ಆದರೆ ಇಲ್ಲಿ ಮರ ಕಾವಿಗೆ ಎದುರುತ್ತದೆ ಎಂಬುದು ಗಾದೆಯ ವಾಚ್ಯಾರ್ಥ. ಆದರೆ ಇದರ ಸೂಚ್ಯಾರ್ಥ ಬೇರೆ. ಅಪಾಯಕಾರಿ ಎಂದು ತಿಳಿದ ವ್ಯಕ್ತಿಗಳು ಯಾವ ಅಪಾಯವವನ್ನು ಮಾಡುವುದಿಲ್ಲ. ಆದರೆ ನಿರಪಯಕಾರಿ ಎಂದು ತಿಳಿದವರೇ ಅಪಾಯ ಮಾಡುವ ಸಾಧ್ಯತೆ ಇರುತ್ತದೆ. ಬೆನ್ನಿನಲ್ಲಿ ಚೂರಿ ಇರಿಯೋರು ಎಂಬುದನ್ನು ತಿಳಿಸುತ್ತದೆ. ಈ ಗಾದೆಯು ವಸ್ತು ರೂಪಕದ ಮುಖಾಂತರ ಮನುಷ್ಯನ ಸ್ವಭಾವವನ್ನು ಚಿತ್ರಿಸುತ್ತದೆ.

ಅಟ್ಟ ಮೇಲೆ ಒಲೆ ಉರೀತು

ಕೆಟ್ಟ ಮೇಲೆ ಬುದ್ದಿಬಂತು.

ಈ ಗಾದೆಯು ಒಂದಕ್ಕೊಂದು ಬೆನ್ನು ಕೊಟ್ಟು ಅರ್ಥ ಪ್ರತೀತಿಯಲ್ಲಿ ಸಮಾನೆಯನ್ನು ಹೊಂದಿದೆ. ಅಡಿಗೆ ಮಾಡಲು ಮೊದಲು ಒಲೆ ಹಚ್ಚಿದಾಗ ಸರಿಯಾಗಿ ಒಲೆ ಉರಿಯುವುದಿಲ್ಲ. ಅದಕ್ಕಾಗಿ ತುಂಬ ಶ್ರಮ ಪಡಬೇಕು. ಊದಿ ಊದಿ ಕಣ್ಣು ಕೆಂಪಗಾಗಿ ಮೂಗಿನಲ್ಲಿ ನೀರು ಬರುತ್ತದೆ. ಆದರೆ ಅಡಿಗೆ ಆದ ಮೇಲೆ

ಒಲೆ ಹೆಚ್ಚಾಗಿ ಉರಿಯುತ್ತದೆ. ಅದನ್ನು ಆರಿಸುವುದಕ್ಕೋಸ್ಕರವೇ ಶ್ರಮ ಪಡಬೇಕಾಗುತ್ತದೆ. ಕಾರಣ ಮೊದಲು ಒಲೆ ಹಚ್ಚಿದಾಗ ಒಲೆ ತಣ್ಣಗಿದ್ದು. ಉರಿಯಲು ಕಷ್ಟವಾಗುತ್ತದೆ. ಕಷ್ಟಪಟ್ಟು ಉರಿಸಿದರೆ ಒಲೆ ಶಾಖ ಹೊಂದುವುದರಿಂದ ತಾನೇ ತಾನಾಗಿ ಉರಿಯುತ್ತದೆ. ಹಾಗೇಯೇ ಯಾವುದಾದರು ಒಂದು ಕೆಲಸವನ್ನು ಕೈಗೊಂಡಾಗ ಅದರಲ್ಲಿ ಕೆಡಕುಂಟಾಗುವವರಗೆ ತಿಳಿಯುವುದಿಲ್ಲ. ಅನಂತರ ತಿಳಿಯುತ್ತದೆ. ಅದರೆ ಅದಕ್ಕು ಮೊದಲು ಕೆಟ್ಟಿರುತ್ತದೆ. ಕೆಟ್ಟಿರುವುದಿಂದಲೇ ಅಲ್ಲಿ ಕೆಡುಕಿದೆ ಎಂದು ತಿಳಿಯುತ್ತದೆಯೇ ಹೊರತು ಅದಕ್ಕೂ ಮೊದಲು ತಿಳಿಯುದಿಲ್ಲ. 'ನಡೆವರೆಡವದೆ ಕುಳಿತವರೆಡವುವರೇ? ಎಂಬ ರಾಘವಾಂಕನ ಮಾತು ಇದನ್ನು ಧ್ವನಿಸುತ್ತದೆ. ಈ ಗಾದೆಯಲ್ಲಿ ಆದಿ ಮತ್ತು ಅಂತ್ಯ ಪ್ರಾಸಗಳೆರಡೂ ಇರುವುದನ್ನು ಕಾಣಬಹುದು. 'ಅಟ್ಟ' 'ಕೆಟ್ಟ' ಎರಡರಲ್ಲಿ ಟ ಕಾರ ಆದಿ ಪ್ರಾಸದ ಸ್ಥಾನದಲ್ಲೂ. 'ಉರಿತು' 'ಬಂತು' ಎಂಬಲ್ಲಿ 'ತ' ಕಾರ ಅಂತ್ಯ ಪ್ರಾಸದ ಸ್ಥಾನದಲ್ಲಿ ಬಂದು ಗಾದೆಗೆ ಒಂದು ಮೆರಗನ್ನು ತಂದಿದೆ.

ಸೀರು ಸಿರ ತಿಂತು

ನತ್ತು ನರತಿಂತು

ಪಡ್ಡೆ ಹೇನು ಅಡ್ಡಾಡಿಕೊಂಡು ತಿಂತು

ದಡಿ ದೌಡಾಡಿಕೊಂಡು ತಿಂತು

ಈ ಗಾದೆಯಲ್ಲಿ ಸೀರು, ನತ್ತು, ಪಡ್ಡೆ, ದಡಿ, ಎಂಬ ನಾಲ್ಕು ಶಬ್ದಗಳು ಒಂದು ಅನುಕ್ರಮದಲ್ಲಿ ಬಳಕೆಯಾಗಿವೆ. ಸೀರು ಎಂದರೆ ಹೇನಿನ ಮೊಟ್ಟೆ, ನತ್ತು ಎಂದರೆ ಮರಿ, ಪಡ್ಡೆ ಎಂದರೆ ಕಾಮಾರಾವಸ್ಥೆಯದು; ದಡಿ ಎಂದರೆ ತುಂಬು ಯೌವ್ವನದ ಪ್ರಬುದ್ಧಾವಸ್ಥೆಯದು. ಹೇನು ಸೀರನ್ನು ಇಕ್ಕುವುದು ಹೆಕ್ ಸಿರ ಅಥವಾ ಕಳ್ಗುಣಿ (ಹಿಂದಲೆಯ ತಗ್ಗಿನ ಗುಳಿ)ಯಲ್ಲಿ. ಆದ್ದರಿಂದ ಈ ಗಾದೆಯ ಮೊದಲ ಸಾಲಾದ "ಸೀರು ಸಿರತಿಂತು" ಎಂಬ ಅಭಿವ್ಯಕ್ತಿ ಸಹಜವಾಗಿದೆ. ಅದೇ ರೀತಿ, ನತ್ತು ಅಷ್ಟಾಗಿ ಅಡ್ಡಾಡಲು ಇನ್ನೂ ಶಕ್ತಿ ಇಲ್ಲದ್ದರಿಂದ ನರಗಳ ಉಬ್ಬಿದ ಭಾಗಕ್ಕೆ ಕಚ್ಚಿಕೊಂಡು ತನ್ನ ಹಸಿವನ್ನು ಹಿಂಗಿಸಿಕೊಳ್ಳುತ್ತದೆಯಾದ್ದರಿಂದ ಎರಡನೆಯ ಸಾಲಾದ 'ನತ್ತು ನರ ತಿಂತು' ಎಂಬ ಅಭಿವ್ಯಕ್ತಿ ಅಷ್ಟೇ ಸಹಜ ಸುಂದರವಾಗಿದೆ. ಪಡ್ಡೆ ಹೇನು ಆಗಲೇ ದೊಡ್ಡದಾಗಿರುವುದರಿಂದ ಪಡ್ಡೆ ಹುಡುಗರಂತೆ ನಿಂತಕಡೆ ನಿಲ್ಲದೆ ಚಂಚಲಮತಿಯಿಂದ ಚಲಿಸುವ ಗತಿಯನ್ನು ನಿರ್ದಿಷ್ಟ ಸ್ಥಾನ ನಿರ್ದೇಶಕ ಶಬ್ದವನ್ನು ಬಳಸಿ ಅರ್ಥಸೀಮಿತತೆಯನ್ನುಂಟು ಮಾಡದೆ: 'ಅಡ್ಡಾಡಿಕೊಂಡು ತಿಂತು' ಎಂಬ ಕ್ರಿಯಾ ವಿಶೇಷಣ ಸಹಿತವಾದ ಅಭಿವ್ಯಕ್ತಿ ಕಣ್ಣಿಗೆ ಕಟ್ಟಿದಂತೆ ಚಿತ್ರಿಸುತ್ತದೆ. ಅದೇ ರೀತಿ ದಡಿ ಕಟ್ಟುಮಸ್ತಾದ ಕೊದಾರಿ(ದಡೂತಿ) ಹೇನಾದ್ದರಿಂದ ಕಟ್ಟು ಹರೆಯದವರಂತೆ ಕುಣಿದು ಕುಪ್ಪಳಿಸುವ ಚಲನೆಯ ತೀವ್ರತೆಯನ್ನು ನಿರ್ದಿಷ್ಟ ಸ್ಥಾನ

ನಿರ್ದೇಶಕವನ್ನು ಬಳಸಿ ಅರ್ಥ ಸೀಮಿತತೆಯನ್ನುಂಟು ಮಾಡದೆ 'ದೌಡಾಡಿಕೊಂಡು ತಿಂತು' ಎಂಬ ಕ್ರಿಯಾ ವಿಶೇಷಣ ಸಹಿತವಾದ ಅಭಿವ್ಯಕ್ತಿ ಸಮರ್ಥವಾಗಿ ಪಡಿಮೂಡಿಸುತ್ತದೆ. ಹೀಗೆ ಹೇನಿನ ಮೊಟ್ಟೆಯಿಂದ ಹಿಡಿದು ದೊಡ್ಡ 'ದಡಿ'ಯವರೆಗಿನ ವಿವಿಧ ಹಂತಗಳ ಸಚಿತ್ರ ವಿವರವನ್ನು ನೀಡುವ ಕ್ರಮಬದ್ಧ ಕಲಾತ್ಮಕ ಅಭಿವ್ಯಕ್ತಿಯ ಈ ಗಾದೆ ಅತ್ಯಂತ ರಮ್ಯವಾಗಿದೆ.

ಏಳು ಸ್ಯಾಸ್ತ್ರಗಿತ್ತಿ ಮನೇಲಿ

ಏಳೆಮ್ಮೆ ಕರೆದರೂ

ಬ್ಯಾಳೆ ಅಗ್ಗರಿಸೋದ್ಕೆ ಈಟು ಬೆಣ್ಣಿಲ್ಲ

ಈ ಗಾದೆ ಶಾಸ್ತ್ರಗಳ ಸಂಪ್ರದಾಯಕ್ಕೆ ಕಟ್ಟುಬಿದ್ದವರ ಹಣೆಬರಹವನ್ನು ಲೇವಡಿ ಮಾಡುತ್ತದೆ. ಗಾದೆಯಲ್ಲಿ ಬರುವ ಏಳು ಎಂಬ ಸಂಖ್ಯೆ ಅರ್ಥಪೂರ್ಣ. ಕರೆಯುವ ಎಮ್ಮೆ ಏಳು; ವಾರದ ದಿನಗಳು ಏಳು, ಅವಳು ಬರಿ ಸ್ಯಾಸ್ತ್ರಗಿತ್ತಿ ಅಲ್ಲ. ಏಳು ಸ್ಯಾಸ್ತ್ರಗಿತ್ತಿ. ಅಂದರೆ ಮಾತೆತ್ತಿದರೆ ಹಬ್ಬ ಹರಿದಿನ ಆ ಶಾಸ್ತ್ರ ಈ ಶಾಸ್ತ್ರ ಎಂದು ಶಸ್ತ್ರದ ಮೊನೆಯೇರಿದವರು ಚಡಪಡಿಸುವಂತೆ ಸದಾ ಚಡಪಡಿಸುವ ಮತ್ತು ಏನೇ ಕಷ್ಟವಾದರೂ ತಪ್ಪದೆ ಮಾಡುವ ಸಂಪ್ರದಾಯಗಿತ್ತಿ. ಅಂಥವಳಿಗೆ ವಾರದ ಏಳು ದಿನಗಳೂ ಒಂದಲ್ಲ ಒಂದು ಇದ್ದೇ ಇರುತ್ತದೆ. ಹೀಗೆ ಹಾಲು, ಮೊಸರು, ಬೆಣ್ಣೆ, ತುಪ್ಪ ಎಲ್ಲ ಶಾಸ್ತ್ರಗಳಿಗೆ ಚುಕ್ತವಾಗಿ ಬೇಳೆ ಅಗ್ಗರಿಸುವುದಕ್ಕೆ ಬೆಣ್ಣೆ ಇಲ್ಲದಂಥ ಸ್ಥಿತಿ ಇಂಥ ಸ್ಥಿತಿಯನ್ನು ವಿಡಂಬನಾತ್ಮಕವಾಗಿ ಗಾದೆಯು ತಿಳಿಸುತ್ತದೆ.

ಸಾಮಾಜಿಕ ಸಮೂಹಗಳಲ್ಲಿಯೇ ಕುಟುಂಬ ಮೂಲಭೂತವಾದದ್ದು ಮುಖ್ಯವಾದದ್ದು ಆಗಿದೆ. ದಾಂಪತ್ಯ ಸಂಬಂಧದ ಮೂಲಕ ಅಸ್ಥಿತ್ವಕ್ಕೆ ಬರುವ ಇದು ಸಂಸ್ಕೃತಿಯನ್ನು ರವಾನಿಸುವ ಒಂದು ಸಂಸ್ಥೆಯೂ ಆಗಿದೆ. ಈ ವ್ಯವಸ್ಥೆಯಲ್ಲಿ ಗಂಡನಿಗೆ ಹೆಂಡತಿ ಮತ್ತು ಹೆಂಡತಿಗೆ ಗಂಡ ಹತ್ತಿರದ ಬಂಧು, ನಮ್ಮ ಸಾಂಪ್ರದಾಯಿಕ ಕುಟುಂಬಗಳಲ್ಲಿ ಒತ್ತು ಬಹುಮಟ್ಟಿಗೆ ಹೆಣ್ಣಿನ ಮೇಲಿದ್ದು. ಅದರ ಏರುಪೇರುಗಳೆಲ್ಲಾ ಹೆಣ್ಣನ್ನು ಅವಲಂಬಿಸಿರುವಂತೆ ಕಾಣುತ್ತದೆ. ಇಂಥ ಅನ್ಯೋನ್ಯತೆಯನ್ನು ಚಿತ್ರಿಸಲು ಬಂದಿರುವಂತಿದೆ ಈ ಗಾದೆ.

ಕೈ ಹಿಡಿದ ಹೆಂಡ್ರು

ಬೆನ್ನು ಹತ್ತಿದ ಚರ್ಮ

ಇದರಲ್ಲಿ ಹೆಂಡತಿಯನ್ನು ಅಧೀನಳೆಂದು ಭಾವಿಸಿದಂತೆ ತೋರಿದರೂ, ಕಡೆಗೆ ಆ ಅರ್ಥ ನಿಲ್ಲುವಂತೆ ತೋರುವುದಿಲ್ಲ. ದೇಹಕ್ಕೆ ಚರ್ಮ ಸೌಂದರ್ಯವನ್ನು ತಂದಿರುವುದಷ್ಟೇ ಅಲ್ಲದೆ. ಶರೀರದ ಶೀತೋಷ್ಣಗಳನ್ನು ಸಮಾನವಾಗಿರುವಂತೆ, ಅಂದರೆ ಒಂದು ವ್ಯವಸ್ಥೆಯಲ್ಲಿರುವಂತೆ ನೋಡಿಕೊಳ್ಳುತ್ತದೆ. ಅದು ಸ್ವಲ್ಪ ವ್ಯತ್ಯಾಸವಾದರೂ ಎಷ್ಟು ಅಪಾಯ ಎಂಬುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಹಾಗೆಯೇ ಹೆಂಡತಿ ಸಂಸಾರಕ್ಕೆ ಒಂದು ಚೆಲುವನ್ನು ಸಂಪಾದಿಸಿಕೊಡುವುದಲ್ಲದೆ, ಅದರ ಸಮತೋಲನಕ್ಕೂ ಕಾರಣವಾಗುತ್ತಾಳೆ. ಸಂಸಾರದಲ್ಲಿನ ಗಂಡ–ಹೆಂಡತಿಯರ ಅವಿಭಾಜ್ಯ ರೀತಿಯ ಅನಿವಾರ್ಯತೆಯನ್ನು 'ಬೆನ್ನು ಹತ್ತಿದ ಚರ್ಮ' ಒತ್ತಿ ಹೇಳುತ್ತದೆ. ಇಡೀ ಗಾದೆಯೇ ಒಂದು ರೂಪಕವಾಗಿ ಧ್ವನಿಪೂರ್ಣವಾಗಿ ಬಳಕೆ ಆಗಿದೆ.

ಗಾದೆಗಳು ಸಾಂಪ್ರದಾಯಿಕವಾದುದನ್ನು ಒಪ್ಪುವುದಷ್ಟೇ ಅಲ್ಲದೆ, ಅದನ್ನು ಪ್ರಶ್ನಿಸುವ ಮತ್ತು ಅದರ ವಿರುದ್ಧ ದನಿಯೆತ್ತುವ ಕೆಲಸವನ್ನೂ ಮಾಡಿವೆ. ಈ ಬಗೆಯ ಗಾದೆಗಳಲ್ಲಿ ಸ್ವತಂತ್ರ ಪ್ರವೃತ್ತಿ ತಾನೇ ತಾನಾಗಿ ಹರಡಿಕೊಂಡಿದೆ. ಸಾಮಾಜಿಕ ಪ್ರಜ್ಞೆ ಮತ್ತು ಜೀವನ ಶ್ರದ್ದೆಗಳು ಪ್ರಬಲತರವಾಗಿ ಪ್ರತಿಪಾದಿತವಾಗಿವೆ. ನಿಷ್ಠುರ ಶೋಧಕ ದೃಷ್ಠಿ ಮತ್ತು ಮೌಲ್ಯಾಭಿವ್ಯಕ್ತಿಗಳು ಇಂಥ ಗಾದೆಗಳ ವೈಶಿಷ್ಟ್ಯವೆನಿಸಿದೆ. ಮೌಲ್ಯಗಳಲ್ಲಿ ಕೆಲವು ಕಾಲ ಮತ್ತು ಪರಿಸರಕ್ಕೆ ಬಂಧಿತವಾಗಿದ್ದು. ಹೊಸ ಆವರಣಕ್ಕೆ ಸಂವೇದಿಸಲಾರವು; ಅಂಥವು ಕ್ರಮೇಣ ಮೃತಾವಸ್ಥೆ ಪಡೆಯುತ್ತವೆ. ಇನ್ನು ಕೆಲವು ಮೌಲ್ಯಗಳು ನಿರ್ದಿಷ್ಟಕಾಲ ಮತು ಪರಿಸರಗಳಿಗೆ ಹೊಂದಿಕೊಂಡಂತೆ ಕಂಡರೂ, ಹೊಸ ಪರಿಸ್ಥಿತಿಗಳಿಗೆ ಪರಿವರ್ತನೆಯ ಮೂಲಕ ಸ್ಪಂದಿಸಬಲ್ಲವು. ಆದರೆ ಸಾರ್ವಕಾಲೀನ ಸಾರ್ವದೇಶೀಯ ಮೌಲ್ಯಗಳು ಕೆಲವಿದ್ದು ಜೀವನದೊಡನೆ ಯಾವಾಗಲೂ ಬದುಕುತ್ತಿರುತ್ತವೆ. ಇವು ಉಸಿರಿನಷ್ಟೇ ಮುಖ್ಯವಾದವುಗಳು, ಪ್ರಕೃತಿಯಷ್ಟೇ ಹೊಸತಾದವುಗಳು, ಮೂಲಭೂತವೂ ಮಹತ್ವದವೂ ಆದ ಇಂಥ ಮೌಲ್ಯಗಳಲ್ಲಿ ಸ್ವಾತಂತ್ರ್ಯವೂ ಒಂದು. ಇದಕ್ಕೆ ಅಭಿವ್ಯಕ್ತಿ ನೀಡುವುದರಲ್ಲಿ ಗಾದೆಗಳು ಸಫಲವಾಗಿದೆ. ಉದಾಹರಣೆಗೆ

ಉಚ್ಚೆ ಕುಡಿದರೂ ತನ್ನಿಚ್ಚೇಲಿರಬೇಕು

ದೇಶಾಂತ್ರ ಹೋದ್ರೂ ಸ್ವತಂತ್ರ ಹೋಗು

ಎಂಬ ಗಾದೆಗಳನ್ನು ನೋಡಬಹುದು. ಅನುಭವವನ್ನು ಸಮರ್ಥವಾಗಿ ಅಲ್ಲಿ ವ್ಯಕ್ತಿಸಲು ಬಂದ ಭಾಷೆಯಿಂದಾಗಿ ಅಭಿವ್ಯಕ್ತಿ ರೀತಿ ಒರಟಾಗಲು ಕಾರಣವಾಯಿತು. ಆದರೆ ಅದರಿಂದ ಗಾದೆಗಳು ಹೆಚ್ಚು ಪರಿಣಾಮಕಾರಿಯಾಗಲು ಸಾಧ್ಯವಾಗಿದೆ. ಮೊದಲ ಗಾದೆಯ 'ಉಚ್ಚೆ' ಮತ್ತು 'ಇಚ್ಚೆ' ಪದಗಳು,

ಎರಡನೆಯದರ 'ದೇಶಾಂತ್ರ' ಮತ್ತು 'ಸ್ವತಂತ್ರ' ಪದಗಳು ಗಾದೆಯ ಪ್ರಾಸ ಲಕ್ಷಣವನ್ನು ಹೇಳುತ್ತಲೇ ಗಾದೆಗಳ ಅನುಭವಕ್ಕೆ ಗಾಢವೂ ಸಾಂದ್ರವೂ ಆದ ಅಭಿವ್ಯಕ್ತಿ ಕೊಡಲು ನೆರವಾಗಿದೆ.

ಸಾಯ್ತಿನಿ ಸಾಯ್ತಿನಿ ಅಂತ ಸಾವಿರ ಕೋಳಿತಿಂದು

ಮುತ್ತಿನ್ಹಂಗೆ ಅವನೆ ನನ್ನ ಮುದಿಗಂಡ

ಈ ಗಾದೆಯು ಹಾಸ್ಯಕ್ಕೆ ಉದಾಹರಣೆಯಾಗಿದೆ. ಯಾವುದು ಆಗಿಲ್ಲವೋ ಅದು ಆಗುತ್ತದೆ ಎಂದು ಅದಕ್ಕಾಗಿ ಜೀವನದ ಎಲ್ಲ ಅನುಭವಗಳನ್ನು ಒಂದೇ ಬಾರಿಗೆ ಪಡೆದು ತೀರಬೇಕು ಎಂಬುದರ ಮೂಲಕ ಹಾಸ್ಯ ಹಾಸು ಹೊಕ್ಕಾಗಿ ಹರಡಿದೆ.

ಗಾದೆಗಳ ಭಾಷೆ ಮತ್ತು ಅಭಿವ್ಯಕ್ತಿಯನ್ನು ಕುರಿತು ಪರಿಭಾವಿಸುವ ಅಗತ್ಯವಿದೆ. ನಾಗರಿಕರ ನಯಗೊಂಡ ಭಾಷೆಗಿಂತ ಭಿನ್ನರೂಪದ ಭಾಷೆಯೇ ಗ್ರಾಮೀಣದ ಭಾಷೆ ಹೆಚ್ಚು ಜೀವಂತವಾದ ಶಕ್ತವಾದ ಭಾಷೆಯೇ ಇದು. ವಾಸ್ತವಿಕತೆಯೇ ಇದರ ಮೂಲನಾಡಿಯಾಗಿದೆ. ಆದ್ದರಿಂದ ಭಾಷೆಯ ನಿಜವಾದ ಜೀವಾಳವನ್ನು ಕಾಣಬೇಕಾದರೆ ಈ ಗ್ರಾಮ್ಯ ಭಾಷೆಗೇ ಹೋಗಬೇಕಾಗುತ್ತದೆ. ಭಾಷೆಯನ್ನು ಬೆಳಸತಕ್ಕವರು ಸಾಮಾನ್ಯ ಮನುಷ್ಯ ಮತ್ತು ಸಹಜ ಕವಿ ಇಬ್ಬರೇ. ಗಾದೆಗಳ ರಚನಾಕಾರ ಅತ್ಯಂತ ಸಾಮಾನ್ಯ ಮನುಷ್ಯ ಮಾತ್ರವಲ್ಲದೆ ಸಹಜ ಕವಿಯೂ ಆಗಿರುವುದರಿಂದ ಗಾದೆಯ ಭಾಷೆಗೆ ಇವರಿಬ್ಬರ ಮೂಲ ಸ್ವಭಾವವಿರುವುದರಲ್ಲಿ ಸಂದೇಹವಿಲ್ಲ. ಅಂದರೆ, ಗಾದೆಯ ಭಾಷೆ ದೈನಂದಿನ ಜೀವನೋಪಯೋಗಿ ಭಾಷೆ ಮಾತ್ರವಾಗಿರದೆ, ಸಾಮಾನ್ಯನ ಕಾವ್ಯ ಭಾಷೆಯೂ ಆಗಿದೆ. ನಾಗರಿಕ ಭಾಷಾ ಜಗತ್ತಿನಲ್ಲಿ ಕಾಣದ ಬಳಸದ ಎಷ್ಟೋ ಅಪೂರ್ವ ಪದಗಳು ಗಾದೆಗಳಲ್ಲಿ ಇನ್ನೂ ಜೀವಂತವಾಗಿರುವುದನ್ನು ಕಾಣುತ್ತೇವೆ. ಉದಾಹರಣೆಗೆ ಇಡಗರ, ಅಡಾಣಿ, ಅಪಾಟಿ, ಅಸಾದಿ, ಈಟು, ಉಕ್ಕೆ, ಉಪ್ಪಾರ, ಊರುಗ, ಎಕ್ಕನಾತಿ, ಎಸರು, ಒಡಾಳೆ, ದೊಪ್ಪೆ, ಕಟಪಟಿ, ಕಡಾಯ, ಕಲಿಂಗಾರು, ಕಂಟು, ಕ್ಯಾತೆ, ಕೊಡಾವಳಿ, ಕೊರವ, ಗೂಡೆ, ತರುವಳಿ, ತಿತ್ತಿ, ತೊಪ್ಪೆ, ದೇವು, ನಿಸೂರು, ಪಡ್ಡೆ, ಬರಕತು, ಬಿಕನಾಸಿ, ಯಾಳ್ಳ, ಹಿಕ್ಮತ್ತು, ಸೀಕು, ಸಾಲಾವಳಿ ಇತ್ಯಾದಿಯಾಗಿ ಪಟ್ಟಿ ಮಾಡುತ್ತಾ ಹೋಗಬಹುದು. ಈ ಒಂದೊಂದು ಮಾತೂ ಆ ಭಾಷೆಗೆ ಶಕ್ತಿಯನ್ನು ತಂದಿದೆ, ಜೀವ ತುಂಬಿದೆ. ಗಾದೆಯ ಈ ಭಾಷೆಯಲ್ಲಿ ಆಡಂಬರವಿಲ್ಲ, ಲಂಬಾಣಿ ಹೆಂಗಸರ ಒಡವೆಗಳ ಭಾರದಂತೆ ಅಲಂಕಾರವಿಲ್ಲ. ನಿರಾಭರಣತೆಯೇ ಅದರ ಸೌಂದರ್ಯ ಈ ಬಿಡಿ ಬಿಡಿ ಪದಗಳಿಂದಲೇ ಗಾದೆಯ ಭಾಷೆಗೆ ಹೊಸ ಆಯಾಮ ಬಂದಿದೆ ಎಂದಲ್ಲ. ಅದರ ಇಡೀ ಅಭಿವ್ಯಕ್ತಿಯೇ ಹಾಗೆ ಇದೆ ಎಂದು ಹೇಳಬೇಕಾಗುತ್ತದೆ.

ಸಾಮಾನ್ಯವಾಗಿ ಗಾದೆಗಳು ಭಾವಕ್ಕೆ ತಕ್ಕಂತೆ ಭಾಷೆಯನ್ನು ದುಡಿಸಿಕೊಳ್ಳುತ್ತವೆ. ಅಭಿವ್ಯಕ್ತಿ ಕೇವಲ ನಿರೂಪಣೆಯಾದಾಗ ಕೂಡ ಭಾಷೆ ತನ್ನ ಜೀವಂತಿಕೆಯನ್ನು ಕಳೆದುಕೊಳ್ಳುವುದಿಲ್ಲ. ಗಾದೆಗಳ ಅಭಿವ್ಯಕ್ತಿಗೆ ಎರಡು ಪ್ರಧಾನ ಗುಣಗಳಿವೆ. ಧ್ವನಿಯ ಮೂಲಕ ಶಕ್ತಿಯನ್ನು ಹೊರೆಯುವುದು ಮತ್ತು ಸಂಭಾಷಣೆಯ ಮೂಲಕ ವೈವಿಧ್ಯವನ್ನು ಸಾಧಿಸುವುದು. ರೂಪಕಾದಿ ಕಾವ್ಯಾಲಂಕಾರಗಳನ್ನು ಬಳಸಿ ಶೈಲಿ ವಿಶಿಷ್ಟವಾಗುವಂತೆ ಮಾಡುವ ಸೂಚ್ಯ ವಿಧಾನವೇ ಮೊದಲನೆಯದು.

ಗಾದೆಯ ಭಾಷಾಭಿವ್ಯಕ್ತಿಯ ಪ್ರಸ್ತಾಪದಲ್ಲಿ ಅದರ ನಾಟಕೀಯತೆಯೂ ಮುಖ್ಯವಾಗಿದೆ. ಸಂಭಾಷಣೆಯ ರೀತಿಗಳಲ್ಲಿ ಕಾಣಿಸಿಕೊಳ್ಳುವ ಇಂತಹ ಗಾದೆಗಳೆ ಒಂದು ವಿಶೇಷ ಗುಂಪಾಗುತ್ತವೆ. ಭಾಷಾ ವೈವಿಧ್ಯ ಹಾಗೂ ಪ್ರಾದೇಶಿಕತೆ ಇವುಗಳ ಮೂಲ ಗುಣಗಳಾಗಿದ್ದು, ಹಾಸ್ಯವೇ ಸ್ಥಾಯಿಯಾಗಿರುತ್ತದೆ. ಮನರಂಜನೆಯ ಇಂತಹ ಗಾದೆಗಳ ಮುಖ್ಯ ಉದ್ದೇಶವಿರುವಂತೆ ಕಾಣುತ್ತದೆ. ಸಾಮಾನ್ಯವಾಗಿ ಇವು ಸಂಕ್ಷಿಪ್ತವಾಗಿರುವುದಕ್ಕಿಂತ ದೀರ್ಘವಾಗಿರುತ್ತವೆ. ಸಂಕ್ಷಿಪ್ತ ಗಾದೆಗಳ ಸಾಂದ್ರಶಕ್ತಿ ಇವಕ್ಕಿಲ್ಲವಾದರೂ ಚೆನ್ನಾಗಿ ರಂಜಿಸುತ್ತವೆ. ಒಂದೆರಡು ಉದಾಹರಣೆಗಳು ಹೀಗಿದೆ:

ನಾಚಿಕೆ ಇಲ್ಲದಳಿಯ ನಾಗರ ಹಬ್ಬಕ್ಕೆ ಬಂದ ಅಂದ್ರೆ
ಇಲ್ಲ ಕಾಣುತ್ತೆ ನೇಗಿಲ ಕೊರಡಿಗೆ ಬಂದೆ

ಲೊಡಬಡೆ ಬೊಡಬೊಡೆ ಸಂತೆ ಸೇರಿತ್ತ ಅಂದ್ರೆ
ಸುತ್ತಲೂ ಸೇರಿತ್ತು ನಟ್ಟ ನಡುವ ಲೊಟಪಟಿ

ಜನಸಾಮಾನ್ಯರ ಭಾಷೆಗೆ ಅನಂತ ಶಕ್ತಿ ಇದೆ ಎನ್ನುವುದಕ್ಕೆ ಇಂತಹ ಗಾದೆಗಳು ನಿದರ್ಶನಗಳಾಗುತ್ತವೆ. ವಿಷಯವನ್ನು ನಾಟಕೀಯವಾಗಿ ಹೇಳುವುದರಲ್ಲೂ ಗಾದೆಯ ರಚನಕಾರರು ನಿಸ್ಸೀಮರು; ನಾಟಕೀಯವಾಗಿ ಹೇಳಿದರೆ ಅಭಿವ್ಯಕ್ತಿ ಹೆಚ್ಚು ಶಕ್ತವಾಗುತ್ತದೆ ಮತ್ತು ಪರಿಣಾಮಕಾರಿಯಾಗುತ್ತದೆ. ವಿಷಯದಲ್ಲಿರುವ ಅಸಂಬದ್ಧತೆಯನ್ನು ಭಾಷೆ ಚೆನ್ನಾಗಿ ಪಡಿ ಮೂಡಿಸಿದೆ. ಆ ಮೂಲಕ ನಗೆಗೂ ಕಾರಣವಾಗುತ್ತದೆ. ಇಷ್ಟಾದರೂ ಇಂತಹ ಗಾದೆಗಳು ಭಾವಕ್ಕಿಂತ ಭಾಷೆಯ ದೃಷ್ಟಿಯಿಂದಲೇ ಹೆಚ್ಚು ಗಮನಾರ್ಹ ಎನಿಸುತ್ತವೆ.

## ೬. ಉಪಸಂಹಾರ

'ಹಲವರ ಜ್ಞಾನ ಒಬ್ಬನ ವಿವೇಕ' ವೇ ಗಾದೆ ಎಂಬುದಾಗಿ ತಿಳಿಸಿದ್ದಾರೆ. ಜನ ಸಾಮಾನ್ಯರು ತಮ್ಮ ಜೀವನದುದ್ದಕ್ಕೂ ಕಂಡಂಥ ಅನುಭವದ ಅಭಿವ್ಯಕ್ತಿಯೇ ಉಕ್ತಿಯಾಗಿ, ಲೋಕೋಕ್ತಿ ಆಗಿ, ನಾಣ್ಣುಡಿಯಾಗಿ ಗಾದೆಯಾಗಿ ಪರಿಣಮಿಸಿದೆ. ಗಾದೆಗಳು ಸಾಮಾನ್ಯವಾಗಿ ಅನುಭವದ ಹೊರಣದಲ್ಲಿ ಮೂಡಿ ಬಂದಿರುವುದರಿಂದ ಅವುಗಳಲ್ಲಿ ಸಹಜತೆ ಇದ್ದು. ಜೀವಂತವಾಗಿದೆ. ಗಾದೆಗಳು ಸಂಕ್ಷಿಪ್ತತೆಯ ಗುಣವನ್ನು ಹೊಂದಿ ಅರ್ಥ ವೈಶಾಲ್ಯತೆಯನ್ನು ಪಡೆದುಕೊಂಡಿವೆ. ಆದುದರಿಂದಲೇ ಗಾದೆಗಳನ್ನು ಆಕಾರದಲ್ಲಿ ವಾಮನನಂತಿದ್ದರೂ ಅರ್ಥದಲ್ಲಿ ತ್ರಿವಿಕ್ರಮ ರೂಪಿಯಾಗಿವೆ. ಎಂಬುದಾಗಿ ವಿದ್ವಾಂಸರು ಹೇಳಿದ್ದಾರೆ. ಇಂಥ ಗಾದೆಗಳ ಸ್ವರೂಪ ಲಕ್ಷಣ ಪ್ರಾಮುಖ್ಯತೆ – ಇವೇ ಮುಂತಾದ ಅಂಶಗಳು ತುಂಬಾ ಪ್ರಾಮುಖ್ಯತೆಯನ್ನು ಪಡೆದಿವೆ. ಆದ್ದರಿಂದ ಇವುಗಳ ಬಗ್ಗೆ ಈ ನಿಬಂಧದ ಮೊದಲು ತಿಳಿಸುವ ಪ್ರಯತ್ನ ಮಾಡಲಾಗಿದೆ.

ಗಾದೆಗಳು ಸಮಾಜದಲ್ಲಿ ಜನಸಾಮಾನ್ಯರ ಸಾಮಾನ್ಯ ಅನುಭವದಿಂದ ಮೂಡಿ ಬಂದ ಅಸಾಮಾನ್ಯ ಉಕ್ತಿಗಳು ಆದುದರಿಂದ ಈ ಗಾದೆಗಳು ಸಮಾಜದ ಆಚಾರ, ವಿಚಾರ, ಸಂಪ್ರದಾಯ, ನಂಬಿಕೆ ಮುಂತಾದ ಅಂಶಗಳನ್ನು ಒಳಗೊಂಡಿರುತ್ತವೆ. ಗಾದೆಗಳು ಒಂದು ಸಮಾಜದ ಸಮಸ್ತ ಅಂಶಗಳನ್ನು ಒಳಗೊಂಡಿರುತ್ತವೆ. ಮಾನವನ ಜನನದಿಂದ ಆರಂಭವಾಗಿ ಆತ ಸಾಯುವವರೆಗೆ ಆತನ ಜೀವನ ಶೈಲಿ ವಿಭಿನ್ನವಾಗಿರುತ್ತದೆ. ಒಂದೊಂದು ಹಂತದಲ್ಲೂ ಒಂದೊಂದು ರೀತಿಯ ಸಾಮಾಜಿಕ ಅಂಶಗಳು ಕಂಡುಬರುತ್ತವೆ. ಈ ಎಲ್ಲಾ ಅಂಶಗಳನ್ನು ಗಾದೆಗಳ ರೂಪದಲ್ಲಿ ಆತ ಹಿಡಿದಿಟ್ಟಿರುತ್ತಾನೆ. ಅಂಥ ಸಾಮಾಜಿಕ ಅಂಶಗಳನ್ನು ಹೊರತೆಗೆದರೆ ಮಾನವನ ಪ್ರಪಂಚದ ಹಲವಾರು ವಿವರಗಳು ಬೆಳಕಿಗೆ ಬರುತ್ತವೆ. ಅಂಥ ಪ್ರಯತ್ನವನ್ನು ಜಾನಪದ ಗಾದೆಗಳಲ್ಲಿ ಸಾಮಾಜಿಕ ಮೌಲ್ಯ ಎಂಬ ಶೀರ್ಷಿಕೆಯ ಮೂಲಕ ತಿಳಿಸಲಾಗಿದೆ.

ಮಾನವನಿಗೆ ಭಾಷೆ ದೊರೆತುದು ಬಹಳ ಈಚೆಗೆ. ಬರಹದ ಭಾಷೆ ಇನ್ನು ಅರ್ವಾಚಿನ. ಆರಂಭದಲ್ಲಿ ಮನುಷ್ಯ ತನ್ನ ಮನಸ್ಸಿನ ಭಾವನೆಗಳನ್ನು ನೃತ್ಯ ಕುಣಿತ, ಸಂಜ್ಞೆಗಳ ಮೂಲಕ ತಿಳಿಸುತ್ತಿದ್ದ. ಭಾಷೆಯ ಉಪಯೋಗ ತಿಳಿದ ಮೇಲೆ ಆತ ತನ್ನ ಎಲ್ಲಾ ಭಾವನೆಗಳನ್ನು ಭಾಷೆಯ ಮೂಲಕವೇ ಹೊರಗೆಡವುತ್ತಿದ್ದಾನೆ. ಗಾದೆಗಳು ಕೂಡ ಭಾಷೆಯಲ್ಲೇ ಅಭಿವ್ಯಕ್ತಗೊಂಡಿವೆ. ಈ ಗಾದೆಗಳು ಹಲವಾರು ಸಾಹಿತ್ಯ ಅಂಶಗಳನ್ನು ಒಳಗೊಂಡು ರಮ್ಯವಾಗಿವೆ. ಗಾದೆಗಳಲ್ಲಿ ರೂಪಕ, ಉಪಮೆ, ಅತಿಶಯೋಕ್ತಿ ಅತ್ಯುಕ್ತಿ ಸ್ವಭಾವೋಕ್ತಿ ಅಲಂಕಾರಗಳ ಜೊತೆಗೆ ಕಿರಿದರಲ್ಲಿ ಹಿರಿದರ್ಥವನ್ನು ಹೇಳುತ್ತವೆ. ಹಾಸ್ಯ

ವಿಡಂಬನೆಯನ್ನು ಒಳಗೊಂಡಿವೆ. ಅಲ್ಲದೆ ಹಳ್ಳಿಗಳಿಗೆ ಸೀಮಿತವಾದ ಹಲವಾರು ನುಡಿಗಟ್ಟುಗಳು ಪದಗಳು, ಅವುಗಳ ಸಹಜ ಸೌಂದರ್ಯ, ಮುಂತಾದವು ಅಪಾರವಾಗಿವೆ. ಈ ಎಲ್ಲ ಅಂಶಗಳನ್ನು ಸಾಹಿತ್ಯಿಕ ಮೌಲ್ಯ ಎನ್ನಬಹುದು.

ಗಾದೆಗಳಲ್ಲಿ ಸಾಮಾಜಿಕ ಮತ್ತು ಸಾಹಿತ್ಯಕ ಮೌಲ್ಯಗಳನ್ನು ಕುರಿತಷ್ಟೇ ಈ ನಿಬಂಧದಲ್ಲಿ ಅಧ್ಯಯನ ಮಾಡಲಾಗಿದೆ. ಆದರೆ ಗಾದೆಗಳು ಕೇವಲ ಇಷ್ಟಕ್ಕೇ ಸೀಮಿತವಾಗಿಲ್ಲ. ಅಲ್ಲದೆ ಈ ನಿಬಂಧದಲ್ಲಿ ಎಲ್ಲಾ ಗಾದೆಗಳ ಸಾಮಾಜಿಕ ಮತ್ತು ಸಾಹಿತ್ಯಿಕ ಮೌಲ್ಯವನ್ನು ಕೂಡ ವಿವೇಚಿಸಲಾಗಿಲ್ಲ. ಈ ನಿಬಂಧ ಒಂದು ಮಿತಿಯಲ್ಲಿ ರಚಿತವಾಗಿದೆ. ಆದುದರಿಂದ ಇನ್ನು ಹಲವಾರು ಗಾದೆಗಳನ್ನು ಈ ನಿಟ್ಟಿನಲ್ಲಿ ಅಧ್ಯಯನಕ್ಕೆ ಒಳಪಡಿಸಬೇಕಾಗಿದೆ. ಜೊತೆಗೆ ಗಾದೆಗಳಲ್ಲಿ ಅಡಗಿರುವ ಇನ್ನಿತರ ಮೌಲ್ಯಗಳನ್ನು ಕುರಿತ ಅಧ್ಯಯನ ಅಗತ್ಯವಾಗಿದೆ. ಗಾದೆಗಳಲ್ಲಿ ವೈಚಾರಿಕ, ವೈಜ್ಞಾನಿಕ, ಜನಪದ ವೈದ್ಯ ಮುಂತಾದವು ಅಡಕವಾಗಿವೆ. ಒಟ್ಟಾರೆಯಾಗಿ ಗಾದೆಗಳ ಸಮಗ್ರ ಅಧ್ಯಯನ ನಡೆಯಬೇಕಾಗಿದೆ. ಆ ಮೂಲಕ ಗಾದೆಗಳ ಪ್ರಪಂಚವನ್ನು ತಿಳಿಯಬಹುದಾಗಿದೆ.

## ೭. ಗ್ರಂಥ ಸೂಚಿ


೧. ಸುಧಾಕರ : **ನಮ್ಮ ಸುತ್ತಿನ ಗಾದೆಗಳು**
ಪ್ರತಿಭಾ ಪ್ರಕಾಶನ
ಎಲ್–೪೨, ಅಧ್ಯಾಪಕರ ನಿವಾಸ
ಮಾನಸಗಂಗೋತ್ರಿ, ಮೈಸೂರು ೦೬
ಎರಡನೇ ಮುದ್ರಣ – ೧೯೮೭

೨. ಡಾ. ರಾಗೌ (ರಾಮೇಗೌಡ) : **ನಮ್ಮ ಗಾದೆಗಳು**
ಡಿ.ವಿ.ಕೆ. ಮೂರ್ತಿ ಪ್ರಕಾಶಕರು
ಮೈಸೂರು – ೦೪
ಐದನೇ ಮುದ್ರಣ – ೨೦೦೭

೩. ನಂ. ತಪಸ್ವಿಕುಮಾರ : **ಕನ್ನಡ ಗಾದೆಗಳ ಸಮೀಕ್ಷೆ**
ಪ್ರಸಾರಾಂಗ
ಮೈಸೂರು ವಿಶ್ವವಿದ್ಯಾನಿಲಯ, ೧೯೭೨

೪. ಡಾ. ರಾಗೌ : **ಕಿಟ್ಟೆಲ್ ಕೋಶದ ಗಾದೆಗಳು**
ಡಿ.ವಿ.ಕೆ.ಮೂರ್ತಿ ಪ್ರಕಾಶಕರು
ಮೈಸೂರು – ೦೪
ಮೂರನೇ ಮುದ್ರಣ – ೧೯೯೮

೫. ಡಾ. ಪಿ.ಕೆ.ರಾಜಶೇಖರ್ : **ಪುರುಷನ ಪುಣ್ಯ ನಾರೀ ಭಾಗ್ಯ**
ಹೊನ್ನಾರು ಜನಪದ ಗಾಯಕರು
ಮೂರನೇ ಮುಖ್ಯ ರಸ್ತೆ
ಜಯನಗರ, ಮೈಸೂರು, ೨೦೦೬

೬. ಸುಧಾಕರ : **ಜಾನಪದ ಮತ್ತು ಕಲಬೆರಕೆತನ**
ರಮ್ಯರೂಪ ಪ್ರಕಾಶನ
ವಿಜಯನಗರ, ಬೆಂಗಳೂರು – ೧೦
೧೯೮೪

೭. ಡಾ. ರಾಗೌ (ರಾಮೇಗೌಡ) : **ಷಷ್ಟಿಸಂಪದ**
ಸಂವಹನ ಪ್ರಕಾಶನ
ಮೈಸೂರು, ೨೦೦೫

೮. ಡಾ. ಎಂ.ಚಿದಾನಂದಮೂರ್ತಿ : **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ**
ಪ್ರಸಾರಾಂಗ
ಮೈಸೂರು ವಿಶ್ವವಿದ್ಯಾನಿಲಯ
ಮೈಸೂರು
ಎರಡನೇ (ಪರಿಷ್ಕತ) ಮುದ್ರಣ, ೧೯೭೯

೯. ಡಾ. ಎಂ.ಚಿದಾನಂದಮೂರ್ತಿ : **ಭಾಷಾವಿಜ್ಞಾನದ ಮೂಲ ತತ್ವಗಳು**
ಡಿ.ವಿ.ಕೆ. ಮೂರ್ತಿ ಪ್ರಕಾಶಕರು
ಮೈಸೂರು – ೦೪
ಐದನೇ ಮುದ್ರಣ, ೧೯೯೮

೧೦. ಮಲ್ಲೇಪುರಂ ಜಿ. ವೆಂಕಟೇಶ : **ಭಾರತೀಯ ಕಾವ್ಯಶಾಸ್ತ್ರ ಪರಿಭಾಷೆ**
ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
೨೦೦೦

